# ಅರಕ್ಷಣೀಯು

ಮೂಲ ಲೇಖಕರು:

**ದಿವಂಗತ ಡಾ|| ಶರಚ್ಚಂದ್ರ ಚಟ್ಟೋಪಾಧ್ಯಾಯರು**

ಅನುವಾದಕರು :

**ಸಿ. ಕೆ. ನಾಗರಾಜರಾವ್**

ಶ್ರೀ ವೃಷನಾಮ ಸಂವತ್ಸರದ
ಆಷಾಢ ಶುದ್ಧ ನವಮಿಯಂದು
ನನ್ನ ಮಾವನವರ
ನೊಂದ ಜೀವ ಅಕಾಲದಲ್ಲಿ ನಂದಿಹೋಯಿತು.
ಅವರ ಆತ್ಮಕ್ಕೆ ಶಾಂತಿ ಬಯಸಿ,
ಅವರ ನಿರ್ಮಲಾಂತಃಕರಣಕ್ಕೆ
ಈ ಅಲ್ಪ ಕಾಣಿಕೆಯನ್ನು
ಅರ್ಪಿಸಿದೇನೆ.

—ನಾಗರಾಜ

# ಅರಿಕೆ

ಇದು 'ಶರತ್ ಸಾಹಿತ್ಯ' ಮಾಲೆಯ ಮೂರನೆಯ ಕುಸುಮ. ಇದು ಹೊರಬೀಳಲು ಹೇಳಲು ಸಾಧ್ಯವಾಗದ ಒಂದು ಮನೋವಿಕಾರವೇ ಕಾರಣವಾಯಿತು. ತೀರ ಅಕಾಲದಲ್ಲಿ ದುಃಖಪೂರ್ಣ ಸನ್ನಿವೇಶವೊಂದು ಉಪಸ್ಥಿತವಾಗಿ ಮನೋವಿಕಾರವನ್ನುಂಟು ಮಾಡಿತು. ಮನಸ್ಸಿನ ಆ ವಿಕಾರ ಸ್ಥಿತಿಯಲ್ಲಿ ಇದ್ದಕ್ಕಿದ್ದ ಹಾಗೆಯೇ ಒಂದು ಸಂಕಲ್ಪವು ತಲೆ ಹಾಕಿತು. ಆ ಸಂಕಲ್ಪವು ನನ್ನ ಮನಸ್ಸಿನಲ್ಲಿ ತಲೆಹಾಕಿ ಇಂದಿಗೆ ಕೇವಲ ಹತ್ತು ದಿವಸಗಳಾದವು.

ಅಂದೇ ಈ ಪುಸ್ತಕವನ್ನು ಕನ್ನಡಿಸಲು ಕುಳಿತುದು. ಕೆಲಸ ಕೈಹಿಡಿದು ಕುಳಿತ ಮೇಲೆ ಸಂಕಲ್ಪ ಸಿದ್ಧಿಸುವುದೋ ಇಲ್ಲವೋ ಎಂದು ಬಹಳ ಸಂಶಯವಾಗಿ ಬಿಟ್ಟಿತ್ತು. ತಾನಾಗಿಯೇ ಅಪ್ರಾರ್ಥಿತವಾಗಿ ಹುಟ್ಟಿದ ಸಂಕಲ್ಪ ತಾನಾಗಿಯೇ ಸಿದ್ಧಿಪಡೆಯಿತು. ಅದಕ್ಕೆ ಸಹಾಯ ನೀಡಿತು ಒಂದು ಅಗೋಚರ ಶಕ್ತಿ.

ಈ ಪುಸ್ತಕವು ಹೊರಬಿದ್ದು ಸಂಕಲ್ಪಸಿದ್ಧಿ ಪೂರ್ಣವಾಗಲು ಸುಬೋಧ ವಿದ್ಯುನ್ ಮುದ್ರಣಾಲಯದ ಶ್ರೀಮಾನ್ ಎಂ. ರಾಮರಾಯರೂ, ಶ್ರೀಮಾನ್ ಬಿ. ರಂಗನಾಥರಾಯರೂ ತಮ್ಮ ತನು ಮನಗಳನ್ನೆಲ್ಲ ಅರ್ಪಿಸಿ ಸಹಾಯ ನೀಡಿದರು. ಅದರಿಂದ ನಾನು ಅವರಿಗೆ ಚಿರಋಣಿ.

128, ನರಸಿಂಹರಾಜ ಕಾಲೋನಿ,
ಬೆಂಗಳೂರು ನಗರ
15-7-1941



ಸಿ. ಕೆ. ನಾಗರಾಜರಾವ್

# ಆರಕ್ಷಣೀಯ

## ೧

"ಅತ್ತೆ, ಹಿಡಿ, ಅಮ್ಮ ಮಹಾ ಪ್ರಸಾದ ಕಳುಹಿಸಿದ್ದಾಳೆ."

"ಯಾರು? ಅತುಲ! ಬಾರಪ್ಪ, ಬಾ" ಎನ್ನುತ್ತಾ ದುರ್ಗಾದೇವಿಯು ಅಡಿಗೆಯ ಮನೆಯಿಂದ ಹೊರಕ್ಕೆ ಬಂದಳು. ಅತುಲನು ಆಕೆಯ ಕಾಲಿ ಗೆರಗಿದನು.

"ಸುಖವಾಗಿರು ಮಗು, ದೀರ್ಘಾಯುವಾಗು!........ಲೇ ಜ್ಞಾನದಾ, ನೋಡು, ನಿನ್ನ ಅತುಲಮಾವ ಬಂದಿದ್ದಾನೆ. ಕುಳಿತುಕೊಳ್ಳುವುದಕ್ಕೆ ಏನಾ ದರೂ ತಂದು ಹಾಕು. ಹಾಗೆಯೇ ಈ ಪ್ರಸಾದವನ್ನು ತೆಗೆದು ಒಳಗಿಡು. ನಿನ್ನೆ ರಾತ್ರಿ ಒಂಬತ್ತು ಹತ್ತುಗಂಟೆಯ ಸಮಯದಲ್ಲಿ ಬೀದಿಯಲ್ಲಿ ಗಾಡಿಯ ಶಬ್ದವಾದದ್ದನ್ನು ಕೇಳಿ ಯಾರು ಬಂದರೂ ಅಂದುಕೊಂಡಿದ್ದೆ. ಅತ್ತಿಗೆ ಬಂದಳೂಂತ ಆಗಲೇ ಗೊತ್ತಾಗಿದ್ದಿದ್ದರೆ ಆಗಲೇ ಬಂದು ಅತ್ತಿಗೆಗೆ ನಮ ಸ್ಕರಿಸಿ ಆಶೀರ್ವಾದ ಪಡೆದು ಬರುತ್ತಿದ್ದೆ. ನಮ್ಮ ಅತ್ತಿಗೆಯಂತಹ ಮನು ಷ್ಯರು ಹುಡುಕಿದರೂ ಈ ಪ್ರಪಂಚದಲ್ಲಿ ಸಿಕ್ಕುತ್ತಾರೆಯೆ? ಅತ್ತಿಗೆ ಆರೋಗ್ಯ ವಾಗಿದ್ದಾರೆ ತಾನೆ, ಅತುಲ? ಜಗನ್ನಾಥಪುರಿಯಿಂದ ಬಂದಿರೀಂತ ಕಾಣು ತ್ತದೆ........ಏನು ಮಾಡುತ್ತಾ ಇದ್ದೀಯೆ ಮಗು? ನಿನ್ನ ಅತುಲಮಾವ ಅಷ್ಟು ಹೊತ್ತಿನಿಂದ ನಿಂತೇ ಇದ್ದಾನೆ"

ತಾಯಿಯ ಕರೆಯನ್ನು ಕೇಳಿ ಸುಮಾರು ಹನ್ನೆರಡು ಹದಿಮೂರು ವರುಷದ ಒಂದು ಕರಿ ಹುಡುಗಿಯು ಚಾಪೆಯೊಂದನ್ನು ಹಿಡಿದು ಒಳಗಿನಿಂದ ಬಂದಳು. ಎಷ್ಟು ಸಾಧ್ಯವೋ ಅಷ್ಟೂ ತಲೆ ತಗ್ಗಿಸಿದ್ದಳು. ಚಾಪೆಯನ್ನು ಹಾಸಿ ಅತುಲನ ಕಾಲಿಗೆ ಪ್ರಣಾಮ ಮಾಡಿದಳು. ಅವಳು ಬಾಯಿಂದ ಯಾವ ಮಾತನ್ನೂ ಆಡಲಿಲ್ಲ; ಅತುಲನ ಕಡೆ ಕಣ್ಣೆತ್ತಿ ನೋಡಲೂ ಇಲ್ಲ.

ಪ್ರಣಾಮ ಮಾಡಿದನಂತರ ಮಹಾಪ್ರಸಾದದ ಪಾತ್ರೆಯನ್ನು ತೆಗೆದುಕೊಂಡು ಅವಳು ನಿಧಾನವಾಗಿ ಒಳಕ್ಕೆ ಹೊರಟುಹೋದಳು. ಆದರೆ ಚೆನ್ನಾಗಿ ನೋಡಿದ ಪಕ್ಷದಲ್ಲಿ ತಡೆಗಟ್ಟಲು ಪ್ರಯತ್ನಿಸುತ್ತಿದ್ದ ಮುಗುಳ್ನಗೆಯ ಪ್ರವಾಹವು ಆ ಹುಡುಗಿಯ ಮುಖಕಣ್ಣುಗಳಿಂದ ಹೊಮ್ಮುತ್ತಿದ್ದುದು ಕಂಡುಬರುತ್ತಿತ್ತು!

ಕೇವಲ ಆ ಹುಡುಗಿಯ ಪರಿಸ್ಥಿತಿಯೊಂದೇ ಹಾಗಿರಲಿಲ್ಲ; ಆ ಸುಂದರ ಯುವಕ ಅತುಲನ ಮುಖದ ಮೇಲೂ ಸಹ ಒಂದು ಅವ್ಯಕ್ತ ಮಿಂಚಿನ ಹೊಳವು ಹೊಳೆಯಿತು; ಅವನ ಆ ಸುಲಕ್ಷಣ ಮುಖಮಂಡಲವು ಇನ್ನೂ ಉಜ್ವಲವಾಯಿತು.

ಅತುಲನು ಚಾಪೆಯ ಮೇಲೆ ಕುಳಿತು ತೀರ್ಥಯಾತ್ರೆಯ ಮಾತುಕತೆಗಳನ್ನಾಡತೊಡಗಿದನು. ಅವನ ತಂದೆಯವರು ಹಳೆಯತರಹದ ಆಗರ್ಭ ಶ್ರೀಮಂತರು. ಬೇಕಾದಹಾಗೆ ಮನೆ, ಮಠ, ಭೂಮಿ, ಕಾಣಿ, ಆಸ್ತಿ ಪಾಸ್ತಿಗಳನ್ನು ಶೇಖರಿಸಿದ್ದರು. ಸರ್ಕಾರದಲ್ಲಿ ಭಾರಿಹುದ್ದೆಯಲ್ಲಿದ್ದು ಪೆನ್ಷನ್ ಆದಮೇಲೆ ಮನೆಯಲ್ಲಿಯೇ ಇದ್ದು ದೇವರ ಧ್ಯಾನದಲ್ಲಿ ಕಾಲಕಳೆಯುತ್ತಿದ್ದರು. ಅವರು ಸ್ವರ್ಗಸ್ಥರಾಗಿ ನಾಲ್ಕು ವರ್ಷಗಳಾದವು. ಬಿ.ಎ. ಪರೀಕ್ಷೆ ಮುಗಿದ ನಂತರ, ಅಂದರೆ ಎರಡು ತಿಂಗಳ ಮುಂಚೆ ತಾಯಿಯನ್ನು ಕರೆದುಕೊಂಡು ಅತುಲನು ತೀರ್ಥಯಾತ್ರೆಗಾಗಿ ಹೋಗಿದ್ದ. ರಾಮೇಶ್ವರದಿಂದ ಪುರಿಯ ವರೆಗೂ ಯಾತ್ರೆ ಮುಗಿಸಿ ಊರಿಗೆ ಆದೇ ಹಿಂತಿರುಗಿದ್ದರು.

ಮಾತುಕತೆಗಳನ್ನೆಲ್ಲ ಕೇಳಿ ದುರ್ಗಾದೇವಿಯು ನಿಟ್ಟುಸಿರು ಬಿಟ್ಟು, "ಬೇರೆಲ್ಲಿಗೆಂದರೂ ದೂರ, ಕಡೆಗೆ ಒಂದು ಸಲ ಕಾಶಿ ವಿಶ್ವನಾಥನ ದರ್ಶನ ಲಾಭ ಪಡೆಯುವ ಅವಕಾಶ ಸಹ ಈ ಜನ್ಮದಲ್ಲಿ ಹೊಂದಲಾರದ ಮಹಾ ಪಾಪಿ ನಾನು" ಎಂದಳು.

"ಅತ್ತೆ, ಕಾಶಿಯೇ ಆಗಲಿ, ಬೇರೆ ಯಾವುದೇ ಆಗಲಿ, ಒಂದು ಸಲ ಎಲ್ಲವನ್ನೂ ಬಿಟ್ಟು ಬಲವಂತದಿಂದ ಮನೆಯಿಂದ ಹೊರಹೊರಡದ ವಿನಹ ಎಲ್ಲಿಗೆ ಹೋಗಲೂ ಸಾಧ್ಯವಿಲ್ಲ. ನಾನು ಬಲವಂತಮಾಡಿ ಕರೆದುಕೊಂಡು ಹೋಗದೆ ಇದ್ದಿದ್ದರೆ ಅಮ್ಮನಿಗೆಲ್ಲಿಯಾದರೂ ಹೋಗುವುದಕ್ಕೆ ಆಗುತ್ತಿತ್ತೇನು?"

ದುರ್ಗಾದೇವಿಯು ಪುನಃ ಒಂದು ನಿಟ್ಟುಸಿರುಬಿಟ್ಟಳು. "ನಿನಗೆಲ್ಲವೂ ಗೊತ್ತಿದೆ, ಮಗು. ನಾನು ಹೇಗೆ ಬಲವಂತಮಾಡಲಿ ? ಅವರಿಗೆ ಬರುವುದು ತಿಂಗಳಿಗೆ ಮುವ್ವತ್ತುರೂಪಾಯಿ. ಅದರಲ್ಲೇ ಊಟ ಉಪಚಾರ, ಅತಿಥಿ ಸತ್ಕಾರ, ಖಾಯಿಲೆ ಕಸಾಯಿಲೆ, ವಿಶಿಷ್ಟ ಖರ್ಚನ್ನೂ ಮಾಡಬೇಕಾಗುತ್ತದೆ. ಇನ್ನು ತೀರ್ಥಯಾತ್ರೆಮಾಡಲು ದುಡ್ಡು ಮಿಗುವುದಾದರೂ ಎಲ್ಲಿಂದ? ಇಷ್ಟೇ ಅಲ್ಲ. ಹುಡುಗಿಗೆ ಹನ್ನೆರಡು ತುಂಬಿ ಹದಿಮೂರಕ್ಕೆ ಬಿತ್ತು – ಮದುವೆಯ ಚಿಂತೆ ಬೇರೆ ತಲೆಯಮೇಲೆ ಹೊರೆಯಾಗಿ ಕುಳಿತಿದೆ! ನಿಜವಾಗಿ ಹೇಳುತ್ತೇನೆ, ಅತುಲ, ಅವರ ಚಿಂತಾಗ್ರಸ್ತ ಮುಖವನ್ನು ನೋಡಿದಕೂಡಲೇ ನನ್ನ ಹೃದಯದ ರಕ್ತವೆಲ್ಲ ಒಣಗಿಹೋಗುತ್ತದೆ. ಹುಡುಗಿ ಬೆಳೆದು ಈಗ ಶತ್ರುವಾಗಿದ್ದಾಳೆ. ಆದರೂ ಅವಳನ್ನು ಹೊಟ್ಟೆಯಲ್ಲಿಟ್ಟುಕೊಂಡು ಉಣಿಸಿ ತಿನಿಸಿ ಇನ್ನೂ ದೊಡ್ಡವಳನ್ನು ತಾಯಿಯಾದವಳು ಮಾಡಲೇ ಬೇಕು."

ದುರ್ಗಾದೇವಿಯ ಕಣ್ಣುಗಳು ಅಶ್ರುಪೂರಿತವಾದವು.

ಆದರೆ ನಿಜವಾಗಿಯೂ ಆಶ್ಚರ್ಯ! ಇಂತಹ ಅತ್ಯಂತ ಚಿಂತಾಗ್ರಸ್ತ, ಕರುಣಾಪೂರಿತ, ಕಾತರವಾಣಿಯನ್ನು ಕೊಂಚವಾದರೂ ಪರಿಗಣಿಸದೆ ಅತುಲನು ನಗುತ್ತಾ, "ಅತ್ತೆ, ನಿನ್ನ ಈ ಮಾತು ಬೇರೆ ಆಗಿಹೋಯಿತು !........ ಹಾಗಾದರೆ, ಬೇರೆ ಯಾರಿಗೂ ಹೆಣ್ಣುಮಕ್ಕಳೇ ಇಲ್ಲವೇನು? ಮದುವೆಗೆ ಸಿದ್ಧವಾದ ಮಗಳಿರುವುದು ನಿನಗೊಬ್ಬಳಿಗೇ ಏನು? ಪ್ರಪಂಚವೇ ತಲೆಯ ಮೇಲೆ ಕೂತಿದೆ ಅನ್ನುವಷ್ಟು ಚಿಂತೆ ನಿನಗೊಬ್ಬಳಿಗೇ ಏನು ?" ಎಂದ.

"ಇದು ಚಿಂತೆಯಷ್ಟೇ ಅಲ್ಲ ಅತುಲ. ನಮ್ಮಗಳಿಗೆ ಇದು ಮೃತ್ಯುಪ್ರಾಯವಾದ ಯಂತ್ರಕ್ಕಿಂತ ದೊಡ್ಡದು. ನನಗೆ ನಮ್ಮ ಸಮಾಜದ ನಿಷ್ಠುರತೆ ಹಾಗು ಕಟುಕತನ ಚೆನ್ನಾಗಿ ಗೊತ್ತು. ಹುಡುಗಿಯ ಲಗ್ನಮಾಡದಿದ್ದರೆ ಬಹಿಷ್ಕಾರ ಹಾಕುತ್ತಾರೆ. ಆದರೆ ಮದುವೆ ಮಾಡುವುದಾದರೂ ಹೇಗೆ? ಅದಕ್ಕೆ ದುಡ್ಡು ಬೇಕು. ದುಡ್ಡೆಲ್ಲಿಂದ ದೊರಕಿಸುವುದು? ಈ ಮನೆಯಲ್ಲಿ ಒಂದು ಹಿಸ್ಸೆ ಮಾತ್ರ ನಮ್ಮ ಭಾಗಕ್ಕೆ ಬರುತ್ತೆ. ಅದು ವಿನಹ ಬೇರೆ ಏನೂ ಇಲ್ಲ."

ಈಗೊಂದರ್ಧ ಗಂಟೆಗೆ ಮುಂಚೆ ಇದೇ ಹುಡುಗಿಯ ಲಗ್ನದ ವಿಚಾರದಲ್ಲಿ ಸತಿಪತಿಗಳಿಗೆ ಜಗಳವಾಗಿತ್ತು. ಅರವಟ್ಟಿ ಊಟಮಾಡಿ, ತಟ್ಟೆಯನ್ನು

ದೂರ ತಳ್ಳಿ ಪತಿಯು ಕಛೇರಿಗೆ ಹೊರಟುಹೋಗಿದ್ದ. ಆ ಪೆಟ್ಟಿನ ಮೇಲೆ ದುರ್ಗಾದೇವಿಗೆ ಪುನಃ ಮತ್ತೊಂದು ಪೆಟ್ಟು ಬಿತ್ತು. ದೊಡ್ಡದೊಡ್ಡ ಎರಡು ಕಣ್ಣೀರಿನ ಬಿಂದುಗಳು ಕಣ್ಣಿಂದ ಉದುರಿ ಕೆನ್ನೆಯ ಮೇಲೆ ಹರಿದು ತೊಡೆಯ ಮೇಲೆ ಟಪ್‌ಟಪ್ ಎಂದು ಧುಮುಕಿದವು. ಕೈಯಿಂದ ಕಣ್ಣೊರೆಸಿಕೊಂಡು ಆಕೆಯು, "ಹಿಂದಿನ ಜನ್ಮದಲ್ಲಿ ನಾನೆಷ್ಟು ಸ್ತ್ರೀಹತ್ಯೆ, ಶಿಶುಹತ್ಯೆ ಮಾಡಿದ್ದೆನೋ? ಅದಕ್ಕೇನೆ, ಅತುಲ, ಈ ಜನ್ಮದಲ್ಲಿ ನನ್ನ ಹೊಟ್ಟೆಯಲ್ಲಿ ಹೆಣ್ಣು ಹುಟ್ಟಿತು" ಎಂದಳು.

"ನೀನು ಹೇಳಿದರೆ ಕೇಳುವುದಿಲ್ಲ ಅತ್ತೆ. ಇಗೋ ನಾನು ಹೋಗಿಬಿಡುತ್ತೇನೆ. ನೀನು ಸುಮ್ಮನಾಗುವುದೂ ಇಲ್ಲ; ಬಾಯಿಗೆ ಬಂದದ್ದನ್ನು ಒದರುತ್ತಲೂ ಇರುತ್ತೀಯೆ!" ಎಂದು ಅತುಲನು ಮೇಲಕ್ಕೆದ್ದನು.

ದುರ್ಗಾದೇವಿಯು ಮತ್ತೊಂದು ಸಲ ಕಣ್ಣೊರೆಸಿಕೊಂಡು, "ಬೇಡಪ್ಪ, ಬೇಡ! ಕೊಂಚ ಕುಳಿತುಕೋ ಮಗು. ಹೋಗಬೇಡ. ಎರಡು ಗಂಟೆ ನಿನ್ನ ಮುಂದೆ ಅಳುವುದರಿಂದ ನನ್ನ ಭಾರ ಎಷ್ಟೋ ಕಡಿಮೆಯಾದಂತೆ ಆಗುತ್ತದೆ. ಭಗವಂತನು ಈ ಹುಡುಗಿಯನ್ನು ನನ್ನ ಹೊಟ್ಟೆಯಲ್ಲೇ ಹುಟ್ಟುವಂತೆ ಬಯಸಿದ್ದರೆ ಅವಳ ಬಣ್ಣಕ್ಕೆ ಕೊಂಚ ಗೌರವ ಛಾಯೆ ಕೊಡಲಿಲ್ಲವೇಕೆ? ಕಪ್ಪಾದದ್ದರಿಂದ ಅವಳನ್ನು ಪರಿಗ್ರಹಿಸಲು ಯಾರೂ ಒಪ್ಪುವುದಿಲ್ಲ! ಎಲ್ಲರೂ ಸುಂದರವಾದ ಹೆಣ್ಣುಗಳನ್ನೇ ಹುಡುಕುತ್ತಾರೆ. ಅಯ್ಯೋ ಸುಡುಗಾಡು ಸಮಾಜವೆ! ಕುಲ, ಶೀಲ, ಸ್ವಭಾವ, ನೀತಿ ಈ ಯಾವ ಗುಣವನ್ನೂ ಪರಿಗ್ರಹಿಸದೆ ಕೇವಲ ಹುಡುಗಿ ಕಪ್ಪೆಂದು ನಿರಾಕರಿಸುವೆ. ಹಾಗೆಂದು ಹುಡುಗಿಗೆ ವಿವಾಹವಾಗಲಿಲ್ಲವೆಂದು ಹುಡುಗಿಯ ಮಾತಾಪಿತೃಗಳನ್ನು ಏಕೆ ದಂಡಿಸುವೆ? ದಂಡಿಸುವ ಅಧಿಕಾರವಾದರೂ ನಿನಗೆಲ್ಲಿಯದು!"

"ಕರಿ ಹುಡುಗಿಯ ಮದುವೆಯಾಗುವುದೇ ಇಲ್ಲವೇನು? ಭ್ರಮರವು ಕಪ್ಪಲ್ಲವೇ? ಕೋಗಿಲೆಯು ಕಪ್ಪಲ್ಲವೇ? ಅವುಗಳು ಬೇಕೆನಿಸುವುದಿಲ್ಲವೇ? ಅವುಗಳಲ್ಲಿ ಆದರ ಭಾವವಿಲ್ಲವೆ? ಇದು ಬಹು ದಿನದಿಂದ ಇರುವ ದೃಷ್ಟಾಂತ, ಅತ್ತೆ!"

"ಹೌದಪ್ಪಾ ಹೌದು. ಈ ದೃಷ್ಟಾಂತವೇನೋ ಬಹು ಕಾಲದಿಂದ ಚಿರಂಜೀವಿಯಾಗಿ ಇದೆ. ಆದರೆ ಸಮಯದಲ್ಲಿ ಈ ದೃಷ್ಟಾಂತವು ಯಾವ

ಕೆಲಸಕ್ಕೂ ಬರುವುದಿಲ್ಲ. ಕೇವಲ ಬಾಯಿ ಮಾತುಗಳಿಂದ ನನಗೆ ಸಮಾಧಾನವೂ ಆಗುವುದಿಲ್ಲ; ಧೈರ್ಯವೂ ಉಂಟಾಗುವುದಿಲ್ಲ. ಮಗು, ಅತುಲ, ಗಿರೀಶಭಟ್ಟಾಚಾರ್ಯರ ಮಗಳ ಮದುವೆಯನ್ನು ಕಣ್ಣಿಂದ ನೋಡಿ ನನ್ನ ಬುದ್ಧಿ ಭ್ರಮಣೆಯಾಗುತ್ತಿದೆ. ಆ ಬಡಪಾಯಿ ಬ್ರಾಹ್ಮಣನ ದೆಶೆಯೂ ನಮ್ಮ ಹಾಗೆಯೇ ಇತ್ತು—ಅವನಿಗೆ ದುಡ್ಡೂ ಇರಲಿಲ್ಲ; ಹುಡುಗಿಯೂ ರೂಪವತಿಯಲ್ಲ. ಆದರಿಂದ ಅರವತ್ತು ವರುಷದ ವರ ದೊರೆತ. ಆಗ ಆ ಹುಡುಗಿಯ ತಾಯಿಯು ಅನುಭವಿಸಿದ ಸಂಕಟ, ದುಃಖ, ನೋವು, ಅಳು ಇನ್ನೂ ನಾನು ಮರೆತಿಲ್ಲ."

"ಅರವತ್ತು ವರುಷವೇ! ಇದೇನು ಅತ್ತೆ ಹೀಗೆ ಹೇಳುತ್ತೀ?" ಎಂದು ಅತುಲನು ಆಶ್ಚರ್ಯದಿಂದ ಕೇಳಿದ.

"ಅರವತ್ತೇಕಿಲ್ಲ? ಅದೇ ಆ ಹರಿ ಚಕ್ರವರ್ತಿಯೇ ವರ. ಅವನ ಅಳಿಯನ ಅಳಿಯ ಆ ಬೀದಿಯ ನಿತಾಯಿ ಚಟರ್ಜಿ ಇದ್ದಾನಲ್ಲ ಅವನಿಗೆ ಈಗ ಎಂಟು ಹತ್ತು ವರುಷದ ಮಗಳು ಇದ್ದಾಳೆ. ಲೆಕ್ಕ ಹಾಕಿ ನೋಡು."

ಇದನ್ನು ಕೇಳಿ ಅತುಲನು ಮೌನತಾಳಿದನು.

"ಆ ಹುಡುಗಿಯು ಗ್ಲಾನಿಯಿಂದ ಜರ್ಝರಿತಳಾಗಿ, ವಿಷ ನುಂಗಿದರೆ, ನೇಣ ಹಾಕಿಕೊಂಡರೆ, ಅಥವಾ ಕುಲಕ್ಕೆ ಕಳಂಕಪ್ರಾಯಳಾದರೆ ನಾನು ತಾಯಿಯಾಗಿ, ಮಾತೃಹೃದಯವುಳ್ಳವಳಾಗಿ ಯಾವ ಮನಸ್ಸಿನಿಂದ ಆ ಹುಡುಗಿಯನ್ನು ಶಪಿಸಲಾದೀತು? ಶಪಿಸುವುದು ಸರಿಯೇ? ನೀನೆ ಹೇಳು."

ಅತುಲನು ಸುಮ್ಮನೇ ಇದ್ದನು. ದುರ್ಗಾದೇವಿಯು ಇದ್ದಕ್ಕಿದ್ದಂತೆಯೇ ಅವನೆರಡೂ ಕೈಗಳನ್ನೂ ಹಿಡಿದುಕೊಂಡು, "ಮಗು, ಅತುಲ, ಜನಗಳೆಲ್ಲ ಹೇಳುತ್ತಾರೆ. ನೀವೆಲ್ಲಾ—ಅಂದರೆ ಈಗಿನ ಕಾಲದ ಹುಡುಗರೆಲ್ಲಾ ದಯಾಧರ್ಮ ಭಾವನೆಗಳುಳ್ಳವರೆಂದು, ನಿಮ್ಮ ಸ್ಕೂಲು ಕಾಲೇಜುಗಳಲ್ಲಿ ಯಾರಾದರೂ ದಯಾಪೂರ್ಣರಾಗಿ ಕನಿಕರದಿಂದ ಈ ಹುಡುಗಿಯನ್ನು ಪರಿಗ್ರಹಿಸಲು ಒಪ್ಪಬಹುದು. ಮಗು, ನೀನು ಮನಸ್ಸುಮಾಡಿ ಹುಡುಕಿಕೊಡಬೇಕು. ಅದೊಂದನ್ನು ನೀನು ಮಾಡಿಬಿಟ್ಟರೆ ನಾನು ಸಾಯುವವರೆಗೂ ನಿಮ್ಮಗಳಿಗೆ ದಾಸಿಯಾಗಿರುತ್ತೇನೆ. ನನಗೆ ಬೇರಾವ ಪ್ರತಿಫಲವೂ ಬೇಡ." ಎಂದು ಅಂಗಲಾಚಿದಳು.

ಅತುಲನು ಶೀಘ್ರವಾಗಿ ಕೈಗಳನ್ನು ಬಿಡಿಸಿಕೊಂಡು ದುರ್ಗಾದೇವಿಯ ಚರಣ ರಜಸ್ಸನ್ನು ಹಣೆಯಲ್ಲಿ ಧರಿಸಿ ಗದ್ಗದ ಕಂಠದಿಂದ ಹೇಳಲುಪಕ್ರಮಿಸಿದ—"ಅದೇಕೆ ಅಷ್ಟೊಂದು ಗಾಬರಿಯಾಗುತ್ತಿ ಅತ್ತೆ? ನಾನು ಪ್ರತಿಜ್ಞೆ ಮಾಡುತ್ತೇನೆ........"

ಆದರೆ ಮುಂದೆ ಅವನ ಬಾಯಿಂದ ಆ ಪ್ರತಿಜ್ಞೆ ಹೊರಬೀಳಲಿಲ್ಲ. ನಾಚಿಕೆಯ ಆವೇಶದಿಂದ ಅವನ ಮುಖಮಂಡಲವೆಲ್ಲ ಕೆಂಪೇರಿ ಕಂಠವು ಬಿಗಿದುಬಂತು. ದುರ್ಗಾದೇವಿಗೆ ಆ ಮಾತಿನ ಕಡೆ ಲಕ್ಷ್ಯಕೊಡಲಾಗಲಿಲ್ಲ. ಆದರೆ ಬೇರೆ ಯಾರಾದರೂ ಆಗಿದ್ದರೆ, ಅತುಲನು ಆ ವೇಗದ ಹೊಡೆತದಲ್ಲಿ ಹೇಳುತ್ತಿದ್ದುದನ್ನು ಇದ್ದಕ್ಕಿದ್ದಹಾಗೆಯೇ ನಿಲ್ಲಿಸಬೇಕಾದ ಪ್ರಮೇಯವೇನಿತ್ತೆಂದು ಶಂಕಿಸುತ್ತಿದ್ದರು.

ಅತುಲನು ತನ್ನನ್ನು ತಾನೇ ಸಮಾಧಾನಕ್ಕೆ ತಂದುಕೊಂಡು ಎದ್ದು ನಿಂತ. ಅವನು ಸಹಜಭಾವದಲ್ಲಿ, "ಆಗಲಿ, ಅತ್ತೆ, ನಾನು ಮನಸ್ಸಿಟ್ಟು ಪ್ರಯತ್ನಿಸುತ್ತೇನೆ—ಜ್ಞಾನದಾ ಎಲ್ಲಿ? ಒಂದಿಷ್ಟು ಎಲೆ ಅಡಿಕೆ ಕೊಡು. ಮನೆಗೆ ಹೋಗೋಣ" ಎಂದ.

"ಲೇ, ಜ್ಞಾನದಾ, ನಿನ್ನ ಅತುಲ ಮಾವನಿಗೆ ಒಂದು ಬೀಡಾ ಮಾಡಿ ಕೊಡಬಾರದೇನೆ?........ಈ ಕರಿ ಕಾಳಿಗೆ ರೂಪವಿಲ್ಲದಿರುವುದೊಂದೇ ಅಲ್ಲ; ಗುಣವೂ ಇಲ್ಲ. ಅಲ್ಲವೇ, ನಾನು, ಈ ಸಣ್ಣ ಪುಟ್ಟದನ್ನೆಲ್ಲಾ ನಿನಗೆ ಇನ್ನೂ ಕಲಿಸಬೇಕೇನೆ? ಮಹಾ ಪ್ರಸಾದ ತೆಗೆದುಕೊಂಡು ಒಳಕ್ಕೆ ಹೋದದ್ದೆ ಹೋದದ್ದು ಪುನಃ ಹೊರಗೆ ಮುಖ ಕೂಡ ಇಟ್ಟಿಲ್ಲ ಜಾಗ್ರತೆ ಎಲೆ ಅಡಿಕೆ ತೆಗೆದುಕೊಂಡು ಬಾ."

"ಸರಿ ಹೋಗಲಿಬಿಡು ಅತ್ತೆ, ನಾನೇ ಹೋಗಿ ತೆಗೆದುಕೊಳ್ಳುತ್ತೇನೆ. ಜ್ಞಾನದಾ? ಎಲ್ಲಿದ್ದಿ?" ಎಂದು ಏರುಧ್ವನಿಯಲ್ಲಿ ಕೂಗುತ್ತಾ ಅತುಲನು ಮಲಗುವ ಕೋಣೆಯೊಳಹೊಕ್ಕನು.

ಎದುರಿಗೆ ಪಾನದಾನಿಯನ್ನಿಟ್ಟುಕೊಂಡು, ಜ್ಞಾನದಾ ಕುಳಿತಿದ್ದಳು. ಅತುಲನು ಒಳಗೆ ಪ್ರವೇಶಿಸುತ್ತಲೇ ಗಂಭೀರಭಾವ ಧರಿಸಿ, "ಈ ಕರಿ ಜ್ಞಾನಳಿಗೆ ರೂಪವೂ ಇಲ್ಲ ಗುಣವೂ ಇಲ್ಲ ಎಂದು ಅತ್ತೆ ಹೇಳುತ್ತಾಳೆ. ಜ್ಞಾನದಾ,

ನಿನ್ನನ್ನು ಒಬ್ಬ ಅರವತ್ತು ವರುಷದ ಮುದಿಯನಿಗೆ ಮದುವೆ ಮಾಡಿಸಬೇಕಾಗುತ್ತಂತೆ" ಎಂದನು.

ಜ್ಞಾನದಾ ಉತ್ತರವನ್ನೇನನ್ನೂ ಕೊಡಲಿಲ್ಲ. ತಲೆತಗ್ಗಿಸಿದ್ದವಳು ಹಾಗೆಯೇ ಎರಡು ದೊಡ್ಡ ಬೀಡಾಗಳನ್ನು ಪಾನದಾನಿಯಿಂದ ಎತ್ತಿಕೊಟ್ಟಳು.

ಅತುಲನು ಹಿಂದೆ ಬಂದು ಕೈಯಿಂದ ಬೀಡಾಗಳನ್ನು ತೆಗೆದುಕೊಂಡು, "ನೋಡು, ಈಗ ಬೀಡಾ ಏನಾದರೂ ಚೆನ್ನಾಗಿದ್ದರೆ ಹೋಗಲೀಂತ ಈ ಸಲಕ್ಕೆ ಕ್ಷಮಿಸಿಬಿಡಲಾಗುತ್ತೆ. ಅರವತ್ತರಿಂದ ಖೋತಾಮಾಡಿ ಇಪ್ಪತ್ತೋ ಇಪ್ಪತ್ತೊಂದೋ ಮಾಡಲಾಗುತ್ತೆ." ಎಂದ.

ಲಜ್ಜೆಯಿಂದ ಜ್ಞಾನದಾ ತಲೆಯನ್ನು ಪಾನದಾನಿಯ ಮುಚ್ಚಳ ತಾಕುವವರೆಗೂ ತಗ್ಗಿಸಿದಳು. ಅತುಲನು ಧ್ವನಿಯನ್ನು ತಗ್ಗಿಸಿಕೊಂಡು, "ಬೇರೆ ಯಾವುದಾದರೂ ಆಗಿದ್ದಿದ್ದರೆ ಅತ್ತೆಯ ಮುಂದೆ ಹೇಳಿಯೇಬಿಡುತ್ತಿದ್ದೆ. ಇನ್ನೇನು ! ... ಹೊತ್ತಾಯಿತು. ಈಸಲ ಹೊರಡುತ್ತೇನೆ " ಎಂದ.

ಜ್ಞಾನದಾ ಭಾಯಿಂದ ಈಗಲೂ ಮಾತುಹೊರಡಲಿಲ್ಲ ಮೊದಲಿನಂತೆಯೇ ಹಾಗೆಯೇ ತಲೆತಗ್ಗಿಸಿ ಕುಳಿತಿದ್ದಾಳೆ.

" ಮಾತನಾಡುವುದಿಲ್ಲವೋ ?.... ಸರಿ" ಎಂದು ಅತುಲನು ಆ ಹುಡುಗಿಯ ಬಿರಿಹೊಯ್ದ ಕೂದಲಿನ ಒಂದು ಗೊಂಚಲನ್ನು ಹಿಡಿದೆಳದು ಜಗ್ಗುತ್ತಾ, " ನೋಡು ಹರಿಚಕ್ರವರ್ತಿಯ ವಯಸ್ಸಿನ ಒಬ್ಬ ಮುದುಕ ಬರುತ್ತಿದಾನೆ— ನಾನು ಹೋಗುತ್ತೇನೆ" ಎಂದು ಹೇಳಿ ಅಲ್ಲಿಂದ ಹೊರಟುಹೋದ.

ಆದರೆ ಪಡಸಾಲೆಯಲ್ಲಿ ಕಾಲಿಡುತ್ತಿದ್ದ ಹಾಗೆಯೇ ಅತುಲನು, "ಅತ್ತೇ, ಜ್ಞಾನುಗೆ ಅಮ್ಮಾ ಬೊಂಬಾಯಿಂದ ಒಂದು ಜೊತೆ ಬಳೆ ಕೊಂಡುಕೊಂಡು ಬಂದಿದ್ದಾಳೆ. ಹೊರಗೆ ಬಂದುನೋಡು" ಎಂದು ಗಟ್ಟಿಯಾಗಿ ಕೂಗಿದ.

"ಎಲ್ಲಿ ಮಗು ?" ಎನ್ನುತ್ತಾ ದುರ್ಗಾದೇವಿಯು ಅಡಿಗೆಯ ಮನೆಯಿಂದ ಹೊರಕ್ಕೆ ಬಂದಳು. ಅತುಲನು ಜೇಬಿನಿಂದ ಎರಡು ಬಳೆಗಳನ್ನು ತೆಗೆದು ಎದುರಿಗಿಟ್ಟನು.

ಅದರ ಹೊಳಪು, ರಂಗು, ಅವರಮೇಲೆ ಮಾಡಿದ್ದ ಕೆಲಸದ ಕುಶಲತೆಯನ್ನು ನೋಡಿ ದುರ್ಗಾದೇವಿಯು ಪುಳಕಿತಳಾಗಿ ದಾತೃವಿನ ಪ್ರಶಂಸೆ ಮತ್ತು ಯಶೋಗಾನ ಮಾಡತೊಡಗಿದಳು.

ಬಳೆಗಳೇನೋ ಗಾಜಿನವು. ಆದರೆ ಆ ಬಗೆಯ ಬಳೆಗಳು ಹಳ್ಳಿಯಕಡೆಯೇಕೆ ಆ ಕಾಲದಲ್ಲಿ ಕಲ್ಕತ್ತೆಯಲ್ಲಿ ಸಹ ದೊರೆಯುತ್ತಿರಲಿಲ್ಲ. ವಾಸ್ತವವಾಗಿ ಅದರ ಹೊಳಪು, ಬಣ್ಣ, ಸೂಕ್ಷ್ಮ ಕೆಲಸ, ಸೌಂದರ್ಯ ಇವುಗಳನ್ನು ನೋಡಿ ಸ್ವಯಂ ಅತುಲನೇ ಸ್ವಂತ ದುಡ್ಡಿನಲ್ಲಿ ಬೆಲೆಗೆ ಕೊಂಡು ತಾಯಿಯ ಹೆಸರಿನಲ್ಲಿ ಕೊಟ್ಟಿದ್ದ.

ತಾಯಿಯು ಬಹಳ ಕೂಗಿದಮೇಲೆ ಜ್ಞಾನದಾ ಹೊರಗೆ ಬಂದಳು. ಸುಮ್ಮನೆ ತಲೆತಗ್ಗಿಸಿ, ಸ್ನೇಹದ ಈ ಪ್ರಥಮ ಕಾಣಿಕೆಯನ್ನು ಕೈಚಾಚಿ ತೆಗೆದುಕೊಳ್ಳುವಾಗ ಅವಳ ಅಂಜಲಿಬದ್ಧ ಕೈಗಳು ನಡುಗಿದವು! ಪುನಃ ಅವಳು ದಾತೃವಿನ ಕಾಲಿಗೆರಗಿ ಅಲ್ಲಿಂದ ನಿಧಾನವಾಗಿ ಹೊರಟು ಹೋದಳು. ಅವಳು ಒಂದು ಮಾತನ್ನೂ ಆಡಲಿಲ್ಲ. ಆದರೆ ಅವಳ ಹೃದಯದಲ್ಲಿ ಆಡಗಿರುವುದನ್ನು ಅಂತರ್ಯಾಮಿಯು ಅರಿತುಕೊಂಡನು.

ಹಿಂದೆ ನಿಂತಿದ್ದ ಈ ಇಬ್ಬರು ಒಂದು ಕ್ಷಣ ಸ್ನೇಹಮುಗ್ಧದೃಷ್ಟಿಯಿಂದ ಆ ಕಿಶೋರಿಯ ಅನಿಂದ್ಯವಾದ ಸುಂದರ ನಿಲುವು, ಆಕಾರ ಮತ್ತು ನಡಿಗೆಯ ಗಾಂಭೀರ್ಯವನ್ನು ನೋಡುತ್ತಿದ್ದರು!

೨

ಹಿರಿಯಣ್ಣ ಗೋಕುಲನಾಥನ ಮರಣಾನಂತರ ಅವನ ವಿಧವೆ ಸ್ವರ್ಣಮಂಜರಿಯು, ವಂಶಹೀನ ಪಿತೃಕುಲದ ಅಲ್ಪಸ್ವಲ್ಪ ಭೂಮಿಕಾಣಿ ಇತ್ಯಾದಿಗಳನ್ನು ಮಾರಿ ಕೈಯಲ್ಲಿ ನಾಲ್ಕು ಕಾಸು ಮಾಡಿಕೊಂಡು ಕಡೇ ಮೈದುನ ಅನಾಥನಾಥನ ಆಶ್ರಯದಲ್ಲಿಯೇ ಇರತೊಡಗಿದ್ದಳು. ಗೋಕುಲನಾಥನಿಗೂ ಅನಾಥನಾಥನಿಗೂ ಮಧ್ಯದವನಾದ ಪ್ರಿಯನಾಥನು ಹೋದ ವರುಷ ಇದೇ ದಿವಸಗಳಲ್ಲಿ ಅನಾಥನಾಥನೊಡನೆ ಜಗಳವಾಡಿ ಎರಡೂ ಮನೆಗೆ ಒಂದಾಗಿದ್ದ ಪಡಸಾಲೆಯ ಮಧ್ಯದಲ್ಲಿ ಗೋಡೆ ಏರಿಸಿಯೇ ಬಿಟ್ಟನು. ಇದು ನೆರೆಹೊರೆಯವರಿಗೆ ನಗುಪಾಟಲಾಗಿತ್ತು. ಏಕೆಂದರೆ ಗೋಡೆ ಎಬ್ಬಿಸಿ ತೀರ ಒಂದು ವರ್ಷ ಸಹ ಪೂರ್ಣವಾಗಿಲ್ಲ. ಆ ಗೋಡೆಯನ್ನು ತೆಗೆಸಿಬಿಡಬೇಕೆಂಬ ಎಲ್ಲರ ಉದ್ದೇಶ್ಯವನ್ನೂ ವ್ಯರ್ಥಮಾಡಿದ ಪ್ರಿಯನಾಥನು ಈಗೇಳು ದಿವಸಗಳಿಂದ ಜ್ವರಪೀಡಿತನಾಗಿ, ಚಿಕಿತ್ಸೆ ಇಲ್ಲದೆ ಇಂದು ಸಾವಿಗೆ ತುತ್ತಾದನು.

ಸಾವಿನ ಹಿಂದಿನ ದಿವಸ, ಸಾವಿನ ಪಂಜರದಿಂದ ಖಂಡಿತ ಬಿಡುಗಡೆ ಇಲ್ಲವೆಂಬುದರಲ್ಲಿ ಕೊಂಚವಾದರೂ ಸಂದೇಹವಿಲ್ಲವೆಂಬುದು ಅರಿವಾಗಿ ಅವನನ್ನು ನೋಡಲು ಊರಿನ ಜನರೆಲ್ಲ ಕಾತರರಾಗಿ ತಂಡತಂಡವಾಗಿ ಬಂದು ಮನೆಯೊಳಗೆ ನುಗ್ಗಿ ಕೊಠಡಿಯ ಬಾಗಿಲಿಗೆ ಕೋಟೆ ಕಟ್ಟಿ ಕಲಕಲ ಧ್ವನಿಯಿಂದ ಅಸ್ಪಷ್ಟವಾಗಿ ತಮ್ಮ ದುಃಖ, ಖೇದಗಳನ್ನು ಪ್ರಕಟಿಸುತ್ತಿದ್ದರು. ಆಗಿನವರೆಗೂ ಪ್ರಿಯನಾಥನ ಪ್ರಜ್ಞೆ ಹೋಗಿರಲಿಲ್ಲ. ಅವನು ಜ್ಞಾನದಿಂದ ಇದ್ದ. ಅತುಲನು ಇಂದಿನವರೆಗೂ ಊರಿನಲ್ಲಿರಲಿಲ್ಲ. ಕಲ್ಕತ್ತೆಯಲ್ಲಿ ತಾನು ವಾಸಿಸುತ್ತಿದ್ದ ಹೋಟೆಲಿನಲ್ಲಿ ಈ ದುಃಖದ ವಾರ್ತೆಯನ್ನು ಕೇಳಿದವನೇ ಅಲ್ಲಿಂದ ಹೊರಟು ಆಗತಾನೇ ಊರಿಗೆ ಬಂದಿದ್ದ. ನೆರೆದ ಜನರ ದಂಡನ್ನು ಬಿಡಿಸಿಕೊಂಡು ರೋಗಿಯ ಕೊಠಡಿಯನ್ನು ಪ್ರವೇಶಿಸಲು ಪ್ರಯತ್ನಿಸುತ್ತಿರುವಾಗ ಎಲ್ಲಿಂದಲೋ ಜ್ಞಾನದಾ ಹುಚ್ಚಿಯಂತೆ ಬಂದು ಅತುಲನ ಕಾಲುಗಳ ಮೇಲೆ ಬಿದ್ದು ತನ್ನ ತಲೆ ಚಚ್ಚಿಕೊಳ್ಳತೊಡಗಿದಳು. ಕೇವಲ ಸಾವು ಸಂಕಟದ ತಮಾಷೆ ನೋಡಬೇಕೆಂದು ಬಂದಿದ್ದ ಕೆಲವರು ಈ ಆಕಸ್ಮಿಕ ವೈಚಿತ್ರ್ಯವನ್ನು ನೋಡಿ ಆಶ್ಚರ್ಯದಿಂದ ಮನದೊಳಗೇ ಅವರವರಿಗೆ ತೋಚಿದಂತೆ ತರ್ಕಿಸತೊಡಗಿದರು. ಅತುಲನ ಪರಿಸ್ಥಿತಿ ಶೋಚನೀಯವಾಗಿತ್ತು. ಅವನು ಆ ದಂಡಿನೆದುರಿಗೆ ದುಃಖ, ಲಜ್ಜೆಗಳಿಂದ ಹತಬುದ್ಧನಾದನು.

ಕ್ಷಣಾನಂತರ ಅತುಲನು ಸಮಾಧಾನಮಾಡಿಕೊಂಡು ಜ್ಞಾನದೆಯನ್ನು ಕಾಲಿನಿಂದ ಬಿಡಿಸಿ ಎಬ್ಬಿಸಲುಪಕ್ರಮಿಸಿದಾಗ ಅವಳು ಇನ್ನೂ ಬಲವಾಗಿ, ಬಿಗಿಯಾಗಿ ಕಾಲನ್ನು ಹಿಡಿದು ಗಟ್ಟಿಯಾಗಿ ಅಳುತ್ತಾ "ತಂದೆಯವರು ಗತಿಸುವ ಈ ಸಮಯದಲ್ಲಿ ಬಾಯಿಂದ ಅವರಿಗೆ ಆಶ್ವಾಸನೆ ಕೊಟ್ಟು ಹೋಗಿ. ನನ್ನ ಭಾಗ್ಯದಲ್ಲಿ ಏನಾದರೂ ಇರಲಿ. ಅವರು ಈಗ ನನ್ನನ್ನು ತೊರೆದು ಹೋಗುವಂತೆಯೋ, ನನ್ನ ಚಿಂತೆಯನ್ನೂ ತೊರೆದು ಪ್ರಾಣಬಿಡುವಂತೆ ಮಾಡಿ. ನಾನು ನಿಮ್ಮಿಂದ ಇನ್ನೇನನ್ನೂ ಯಾಚಿಸುವುದಿಲ್ಲ" ಎಂದಿಷ್ಟು ಹೇಳಿ ಪುನಃ ಅದೇ ರೀತಿ ತಲೆಚಚ್ಚಿಕೊಂಡು ಅಳತೊಡಗಿದಳು.

ಅವಳ ಚಿಂತಾಗ್ರಸ್ತ, ದುರ್ಭಾಗ್ಯ ತಂದೆಯು ಅತ್ಯಂತ ಶೋಚನೀಯ ಸ್ಥಿತಿಯಲ್ಲಿ, ತೀರ ಅಕಾಲದಲ್ಲಿ, ಸಾವಿನಪಂಜರದಲ್ಲಿ ಸಿಕ್ಕಿದ್ದಾರೆ. ಈ ಸಮಯದಲ್ಲಿ ಜ್ಞಾನದೆಗೆ ಯಾವುದು ವಿಹಿತ, ಯಾವುದು ವಿಹಿತವಲ್ಲವೆಂದು ವಿಚಾರ

ಮಾಡುವ ಅವಕಾಶವಿಲ್ಲ. ಇಷ್ಟು ಜನಗಳೆದುರಿಗೆ, ತಾನು ಹೇಳುತ್ತಿರುವುದೇನು ? ತಾನು ಮಾಡುತ್ತಿರುವುದೇನು ? ಎಂಬುದನ್ನೂ ಅವಳು ಯೋಚಿಸಲಿಲ್ಲ. ಅವಳು ಹಾಗೆಯೇ ತಲೆ ಚಚ್ಚಿಕೊಳ್ಳುತ್ತಿದ್ದಾಳೆ.

ಆದರೆ ಅತುಲನು ಸಂಯಮಿ. ಜ್ಞಾನದೆಯ ಈ ಅಸಂಗತ ವ್ಯವಹಾರದಿಂದ ಅವನ ಹೃದಯದಲ್ಲಿ ಬೇಕಾದಷ್ಟು ಕ್ಲೇಶವುಂಟಾಗಿರಬಹುದು. ಆದರೂ ಆ ದಂಡಿನ ಮುಂದೆ— ಕುತೂಹಲಭರಿತನಾದ ಆ ಅಸಂಖ್ಯಾತ ತೀಕ್ಷ್ಣ ಕಣ್ಣುಗಳ ಮುಂದೆ ಅವನು ಕಠಿಣಚಿತ್ತನಾಗಬೇಕಾಯಿತು. ಅವನು ಒಡನೆಯೇ ಕಾಲುಬಿಡಿಸಿಕೊಂಡು, "ಛೀ ಬಿಡು ! ಇದೇನು ಮಾಡುತ್ತಿದ್ದೀಯೆ! ಕೂಗಬೇಡ, ಅಳಬೇಡ, ಶಾಂತಳಾಗು. ಹಾಗಾದರೆ ನಾನು ಯಾವುದನ್ನು ಹೇಳಬೇಕೋ ಅದನ್ನು ಹೇಳುವುದಿಲ್ಲವೇನು ?" ಎಂದು ಕಟುಮಿಶ್ರ ಮೃದು ವಚನವನ್ನಾಡಿದನು.

ಅಷ್ಟೆ ! ನೆಟ್ಟಗೆ ಹೋಗಿ ರೋಗಿಯಮಂಚದ ಒಂದು ಕೊನೆಯಲ್ಲಿ ಕುಳಿತ. ದುರ್ಗಾದೇವಿಯು ಪತಿಯ ತಲೆಯಬಳಿ ಕುಳಿತಿದ್ದಳು. ಅತುಲನ ಮುಖವನ್ನು ನೋಡಿ ಅವಳು ಸುಮ್ಮನೆ ಅಳತೊಡಗಿದಳು.

ನೆರೆಮನೆಯ ನೀಲಕಂಠ ಚಟರ್ಜಿಯು ಬಾಗಿಲಬಳಿ ನಿಂತಿದ್ದರು. ಅತುಲನು ತಡಮಾಡುತ್ತಿರುವುದನ್ನು ನೋಡಿ, "ನೋಡು, ಪ್ರಿಯನಾಥನಿಗೆ ಇನ್ನೂ ಕೊಂಚ ಜ್ಞಾನವಿದೆ. ನೀನೇನು ಹೇಳಬೇಕೆಂದಿರುವೆಯೋ ಈಗಲೇ ಗಟ್ಟಿಯಾಗಿ ಹೇಳಿಬಿಡು. ಅಂದರೆ ಅವನಿಗೆ ಎಲ್ಲಾ ಗೊತ್ತಾಗುತ್ತೆ" ಎಂದರು.

ಆ ವೃದ್ಧನ ಈ ಮಾತನ್ನೇ ಅದೇ ಉಸಿರಿನಲ್ಲಿ ಇನ್ನೂ ಒಬ್ಬಿಬ್ಬರು ಅನುಮೋದಿಸಿದರೆಂದು ಹೇಳಬೇಕಾದ ಅವಶ್ಯಕತೆ ಏನೂ ಇಲ್ಲ.

ಆ ದಂಡನ್ನು ನೋಡಿ ಅತುಲನು ಮೊದಲೇ ರೇಗಿದ. ಇದರ ಮೇಲೆ ಆ ಜನಗಳ ಈ ಅಕ್ರಮ ಕುತೂಹಲ ಅವನನ್ನು ಕಿಡಿಕಿಡಿ ಮಾಡಿತು. "ನೀವು ವ್ಯರ್ಥವಾಗಿ ಹೀಗೆ ಕೋಟೆ ಕಟ್ಟಿ ರೋಗಿಗೆ ಏನೂ ಉಪಕಾರಮಾಡಲಾರಿರಿ. ಕೊಂಚ ಹೊರಗೆಹೋಗಿ ಕುಳಿತುಕೊಂಡರೆ ನಾನು ಹೇಳಬೇಕಾದದ್ದನ್ನು ಹೇಳಲಾದೀತು."

ನೀಲಕಂಠ ಚಟರ್ಜಿಗೆ ಕೋಪಬಂತು. "ವ್ಯರ್ಥ? ಅದೇಕೆ? ನೆರೆ ಹೊರೆಯುವರ ವಿಪತ್ತಿನಲ್ಲಿ ನೆರೆಹೊರೆಯುವರೇ ಬರುತ್ತಾರೆ! ನೀನುತಾನೆ ಏನು ಉಪಕಾರಮಾಡುವುದಕ್ಕೇಂತ ಹೋಗಿ ಹಾಸಿಗೆಯಮೇಲೆ ಕುಳಿತಿದ್ದೀ?"

ಅತುಲನು ಎದ್ದು ದೃಢ ಸ್ವರದಲ್ಲಿ ಹೇಳಿದ — "ನಾನು ಉಪಕಾರ ಮಾಡಲಿ ಬಿಡಲಿ ಅದು ಬೇರೆ. ಆದರೆ ನೀವುಗಳು ಹೀಗೆ ಕೋಟೆ ಕಟ್ಟಿ ಬರುವ ಗಾಳಿಗೆ ಅಡ್ಡಿಮಾಡಿ ಅಪಕಾರಮಾಡುವುದಕ್ಕೆ ನಾನೆಂದಿಗೂ ಬಿಡಲಾರೆ. ಎಲ್ಲರೂ ಹೊರಗೆ ಹೋಗಿಬಿಡಿ."

ಅವನ ಭಾವವನ್ನು ನೋಡಿ ನೀಲಕಂಠ ಚಟರ್ಜಿಯು ಎರಡು ಹೆಜ್ಜೆ ಹಿಮ್ಮೆಟ್ಟಿ, "ಇನ್ನೂ ನಿನ್ನೆ ಮೊನ್ನೆ ಕಣ್ಣುಬಿಟ್ಟ ಹುಡುಗ. ನಿನಗೆ ಇಷ್ಟೊಂದು ತಲೆಹರಟೆ" ಎಂದರು.

ಯಾರೋ ಆ ವೃದ್ಧನ ಮರೆಯಲ್ಲಿ ನಿಂತು, "ಎಂ.ಎ., ಬಿ ಎ., ಪ್ಯಾಸು ಮಾಡಿಲ್ಲವೇನು?" ಎಂದರು.

ಹತ್ತು–ಹನ್ನೆರಡು ವರ್ಷದ ಒಬ್ಬ ಹುಡುಗ ಇಣಿಕಿನೋಡುತ್ತಿದ್ದ. ಅತುಲನು ಯಾರಮಾತಿಗೂ ಲಕ್ಷ್ಯಕೊಡದೆ ಆ ಹುಡುಗನನ್ನು ಹಿಂದಕ್ಕೆ ತಳ್ಳಿ ಬಿಟ್ಟ. ಅವನು ಹೋಗಿ ಇನ್ಯಾರಮೇಲೋ ಬಿದ್ದ. ಆ ಹುಡುಗನು ಯಾರ ಮೇಲೆ ಬಿದ್ದನೋ ಅವನು, "ಡೆಪ್ಯುಟಿಕಮೀಷನರ್ ಮಗ" ಇತ್ಯಾದಿ ಏನೇನೋ ಹೇಳುತ್ತಾ ಹೊರಟುಹೋದ. ನೀಲಕಂಠ ಚಟರ್ಜಿ ಮೊದಲಾದ ವರು ಅತುಲನು ಹೇಳಬೇಕೆಂದಿರುವ ಮಾತನ್ನು ಕೇಳುವ ಆಸೆ ಕಾಣದೆ ಮನ ದೊಳಗೇ ಬೈದುಕೊಂಡು ಗೊಣಗುಟ್ಟಿಕೊಂಡು ಹೊರಟುಹೋದರು.

ಹೊರಗಡೆ ಯಾರೂ ಇಲ್ಲವೆಂದು ತಿಳಿದಮೇಲೆ ಅತುಲನು ಮೃತ ಪ್ರಾಯ ರೋಗಿಯ ಮುಖಕ್ಕೆ ಮುಖವಿಟ್ಟು, "ಮಾವಾ!" ಎಂದು ಕೂಗಿದ. ಪ್ರಿಯನಾಥನು ಕೆಂಪೇರಿದ ಕಣ್ಣನ್ನರಳಿಸಿ ಪ್ರಜ್ಞೆ ಇಲ್ಲದವನಂತೆ ಕಕ್ಕಾವಿಕ್ಕಿ ಯಾಗಿ ನೋಡತೊಡಗಿದ. ಅತುಲನು ಪುನಃ ಗಟ್ಟಿಯಾಗಿ, "ನನ್ನಗುರುತು ಗೊತ್ತಾಯಿತೆ" ಎಂದ. ಪ್ರಿಯನಾಥನು ಅಸ್ಪಷ್ಟ ಸ್ವರದಲ್ಲಿ, "ಅತುಲ!" ಎಂದ.

"ಈಗ ಹೇಗಿದೆ?"

ಪ್ರಿಯನಾಥನು ತಲೆಯಲ್ಲಾಡಿಸಿ ಅದೇ ಅಸ್ಪಷ್ಟ ಸ್ವರದಲ್ಲಿ, "ಸರಿಯಾಗಿಲ್ಲ" ಎಂದ.

ಅತುಲನ ಕಣ್ಣುಗಳು ನೀರಿನಿಂದ ತುಂಬಿಬಂದವು. ಬಹು ಪ್ರಯಾಸದಿಂದ ತಡೆದುಕೊಂಡು ಆ ದುಃಖ, ಕಣ್ಣೀರುಗಳಿಂದುಂಟಾದ ಗದ್ಗದ ಕಂಠವನ್ನು ಸರಿಮಾಡಿಕೊಂಡು, "ಮಾವ, ನಾನು ನಿಮ್ಮೊಡನೆ ಒಂದು ಮಾತನ್ನು ಹೇಳಲು ಇಚ್ಛಿಸುತ್ತೇನೆ. ಇಂದಿನಿಂದ ನಾನು ಜ್ಞಾನದಾಳ ಭಾರವನ್ನು ವಹಿಸುತ್ತೇನೆ. ನೀವು ನಿಶ್ಚಿಂತರಾಗಿ" ಎಂದು ಹೇಳಿದನು.

ಪ್ರಿಯನಾಥನಿಗೆ ಅರ್ಥವಾಗಲಿಲ್ಲ. ಅಲ್ಲಿ ಇಲ್ಲಿ ದೃಷ್ಟಿ ಹೊರಳಿಸಿ, "ಜ್ಞಾನದಾ ಎಲ್ಲಿ?" ಎಂದ.

ದುರ್ಗಾದೇವಿಯು ಪತಿಯ ಮುಖದ ಬಳಿ ಮುಖವಿಟ್ಟು ಗದ್ಗದ ಸ್ವರದಲ್ಲಿ, "ಜ್ಞಾನದಾನ ಒಂದು ಸಲ ನೋಡಬೇಕೆ?" ಎಂದು ಕೇಳಿದಳು.

ಪ್ರಿಯನಾಥನು ಮೊದಲು ಯಾವ ಉತ್ತರವನ್ನೂ ಕೊಡಲಿಲ್ಲ. ಕಡೆಗೆ, "ಇಲ್ಲ" ಎಂದ.

ದುರ್ಗಾದೇವಿಯು ಅಳತೊಡಗಿದಳು. "ಕೇಳಿಸಿತೇ? ಅತುಲ ಏನು ಹೇಳುತ್ತಾ ಇದ್ದಾನೆ ಗೊತ್ತಾಯಿತೆ? ಅವನು ನಿಮ್ಮ ಜ್ಞಾನದಾ ಭಾರವನ್ನು ವಹಿಸುತ್ತಾನಂತೆ. ಇನ್ನು ನೀವೇನೂ ಚಿಂತಿಸಬೇಡಿ. ಆ ಅಭಾಗಿನಿಗೆ ನಿಮ್ಮಿಂದ ಬೇಕಾದಷ್ಟು ಬೈಗಳಾಗಿವೆ, ಕಟುವಚನಗಳಾಗಿವೆ. ಇಂದು ಒಂದು ಸಲ ಕರೆದು ಆಶೀರ್ವದಿಸಿ."

ಪ್ರಿಯನಾಥನು ಸುಮ್ಮನೆ ನೋಡತೊಡಗಿದ. ದುರ್ಗಾದೇವಿಯು ಪುನಃ ಅದೇ ಮಾತನ್ನು ಹೇಳಿದಳು. ಅವನ ಕಣ್ಣುಗಳಿಂದ ಎರಡು ತೊಟ್ಟು ನೀರು ಜಾರಿ ಬಿತ್ತು. ನಿಶ್ಶಕ್ತವಾದ ಕೈಯನ್ನು ಬಹು ಪ್ರಯಾಸದಿಂದ ಎತ್ತಿ ಅತುಲನ ಹಣೆಯ ಮೇಲೊಂದು ಸಲ ಆಡಿಸಿ ಅವನು ಮುಗ್ಗುಲಾದನು. ಅವನ ಬಾಯಿಂದ ಒಂದು ಮಾತೂ ಹೊರಬೀಳಲಿಲ್ಲ. ಸಾವಿನ ಸಮಯದಲ್ಲಿ ಹೊರೆ ಇಳಿಸುವ ಕೆಲಸದಲ್ಲಿ ಸಫಲತೆಹೊಂದಿದ ಅನುಭವವು ನಿಸ್ಸಂಶಯವಾಗಿಯೂ ಅತುಲನಿಗಾಯಿತು. ಆದರ ಅನುಭವದಿಂದ ಅತುಲನು ಬಾಲಕನಂತೆ ಅತ್ತುಬಿಟ್ಟ. ಇದಕ್ಕೆ ಸಾಕ್ಷಿಗಳು – ದುರ್ಗಾದೇವಿ ಮತ್ತು ಆ ಅಂತರ್ಯಾಮಿ.

ಮೂರನೆಯ ದಿವಸ ಸಾಯಂಕಾಲ ಪ್ರಿಯನಾಥನು ಮೂವತ್ತು ರೂಪಾಯಿನ ನೌಕರಿಯ ಮೇಲಿನ ಮೋಹವನ್ನು ತೊರೆದು, ಇಪ್ಪತ್ತಾರು ವರ್ಷದ ಪತ್ನಿಯ ಮತ್ತು ಹದಿಮೂರು ವರುಷದ ಕರೀ ಹುಡುಗಿಯ ಭಾರವನ್ನು ತನಗಿಂತಲೂ ದುರ್ಭಾಗ್ಯನಾದ ಬೇರೊಬ್ಬ ಆತ್ಮೀಯನ ಮೇಲೆ ಹೊರಿಸಿ, ಕೇವಲ ಮೂವತ್ತಾರು ವರ್ಷದ ಪ್ರಾಯದಲ್ಲಿ, ಯಾವ ತರಹದ ಚಿಕಿತ್ಸೆಯನ್ನೂ ಪಡೆಯದೆ, ಎಂಬತ್ತು ವರ್ಷದ ಮುಪ್ಪಿನ ಮುದುಕನಂತಹ ಜೀರ್ಣಶೀರ್ಣ ದೇಹವನ್ನು ತುಳಸೀಕಟ್ಟೆಯ ಪಕ್ಕದಲ್ಲಿ ತ್ಯಜಿಸಿ, ರಾಮ, ಕೃಷ್ಣ, ಗಂಗಾ, ನಾರಾಯಣ ಇತ್ಯಾದಿ ಭಗವನ್ನಾಮೋಚ್ಚಾರಣೆಯನ್ನು ಕೇಳುತ್ತ ಕೇಳುತ್ತ ಸತ್ತುಹೋದ.–ಅಲ್ಲ ಅಲ್ಲ ಹಿಂದೂಗಳ ಸ್ವರ್ಗಕ್ಕೆ ಏರಿಹೋದ!

## ೨

ಕಿರಿಯ ತಮ್ಮ ಅನಾಥನಾಥನಿಗೆ ಪಡಸಾಲೆಯಲ್ಲಿ ಈ ಒಂದು ವರ್ಷದ ಹಿಂದೆ ಏರಿಸಿದ್ದ ಗೋಡೆಯಲ್ಲಿ ಒಂದು ಬಾಗಿಲಿಡಬೇಕಾಗಿ ಬಂತು. ಅಣ್ಣ ಪ್ರಿಯನಾಥನ ವೈಕುಂಠ ಸಮಾರಾಧನೆಯು ಕಳೆದು ನಾಲ್ಕಾರು ದಿವಸಗಳಾದ ಮೇಲೆ ಒಂದು ದಿನ ಕಛೇರಿಗೆ ಹೋಗುವ ಮುನ್ನ ಅನಾಥನಾಥನು ಎಲೆ ಅಡಿಕೆ ಅಗಿಯುತ್ತಾ ಬಾಗಿಲ ಬಳಿ ನಿಂತು, "ಇನ್ನು ಸುಮ್ಮನಿದ್ದರೆ ಕೆಲಸವಾಗುವಹಾಗಿಲ್ಲ, ಅತ್ತಿಗೆ. ಅಣ್ಣನನ್ನೊಡನೆ ಬೇಕಾದ ಕೆಟ್ಟ ವ್ಯವಹಾರ ಮಾಡಿರಲಿ, ನಿನಗೆ ಒಂದು ಹೊತ್ತು ಒಂದು ತುತ್ತು ಅನ್ನಹಾಕಬೇಕಾದುದು ನನ್ನ ಕರ್ತವ್ಯ. ಆದರೆ ಈ ಬೆಳೆದ ಹುಡುಗಿಯ ಲಗ್ನದ ಭಾರವನ್ನು ವಹಿಸಲು ನನ್ನಿಂದ ಸಾಧ್ಯವಿಲ್ಲ. ಹೇಳಿಕೊಳ್ಳುವುದಕ್ಕೇನೋ ನನಗೆ ತಿಂಗಳಿಗೆ ನೂರೈವತ್ತು ರೂಪಾಯಿಗಳು ಬರುತ್ತವೆ. ನನಗೂ ಮಕ್ಕಳು ಮರಿ ಏನೂ ಕಡಿಮೆ ಇಲ್ಲ. ಇಷ್ಟರಲ್ಲಿ ಅವರ ಖರ್ಚೇ ಮುಗಿಯುವುದು ಬಹಳ ಕಷ್ಟ. ಅಲ್ಲದೆ ನನ್ನ ಮಗಳೂ ಮದುವೆಗೆ ನೆರೆದು ನಿಂತಿದ್ದಾಳೆ. ಹನ್ನೊಂದು ತುಂಬಿ ಹನ್ನೆರಡಕ್ಕೆ ಬಿದ್ದಿದೆ. ನೀನೂ ಎಲ್ಲವನ್ನೂ ನೋಡುತ್ತಲೇ ಇದ್ದೀಯೆ. ಅದಕ್ಕೋಸ್ಕರವೇ ನೀನು ಮಗಳನ್ನು ಕರೆದುಕೊಂಡು ಹರಿಪಾಲಪುರಕ್ಕೆ ಹೋಗಿಬಿಡುವುದು ಒಳ್ಳೆಯದು" ಎಂದನು.

ದುರ್ಗಾದೇವಿಯು ಅಡಿಗೆಯಮನೆಯಲ್ಲಿ ಒಂದು ಮೂಳೆಯನ್ನು ಹಿಡಿದು ಗೋಡೆಗೆ ಒರಗಿ ನಿಂತಿದ್ದಳು. ಅವಳು ಭಯಸಂಕೋಚಗಳಿಂದ, "ಅಣ್ಣನ ಸ್ಥಿತಿಗತಿಗಳಂತೂ ನಿನಗೆ ತಿಳಿದೇ ಇದೆ. ಅವನ ಹತ್ತಿರ ಏನೂ ಇಲ್ಲ. ಇಂತಹ ಭಾರಿ ವಿಪತ್ಕಾಲದಲ್ಲಿ ಸಮಾಚಾರವನ್ನು ತಿಳಿದೂ ಸಹ ಒಂದುಸಲವಾದರೂ ನೋಡುವುದಕ್ಕೂ ಬರಲಿಲ್ಲ. ಅದೂ ಅಲ್ಲದೆ ಅವರೇ ಬಂದು ಸ್ವತಃ ಕರೆದು ಕೊಂಡು ಹೋಗದ ವಿನಹ ನಾನೇ ಹೇಗೆತಾನೆ ಹೋಗಬಲ್ಲೆ?" ಎಂದಳು.

ದುರ್ಗಾದೇವಿಯ ಹಿರಿಯ ವಾರಗಿತ್ತಿ ಸ್ವರ್ಣಮಂಜರಿಯು ಮೈದುನನ ಬಳಿ ಗೋಡೆಯ ಮರೆಯಲ್ಲಿಯೇ ನಿಂತಿದ್ದಳು. ಅವಳು ಬಾಗಿಲಸಂದಿಯಿಂದ ಇಣಿಕಿ, "ನಿಮ್ಮಣ್ಣನ ಸ್ಥಿತಿ ಚೆನ್ನಾಗಿಲ್ಲ. ನನಗೆ ಗೊತ್ತು. ನಿನ್ನ ಈ ಮೈದುನನೇನು ದಿವಾನನೇ? ನೂರೈವತ್ತು ರೂಪಾಯಿಯೇನೋ ಬರುತ್ತೆ ತಿಂಗಳಿಗೆ. ಯಾತಕ್ಕೆ! ಬರೀ ಹೆಸರಿಗೆ! ನಾನು ಈ ಸಂಸಾರವನ್ನು ಎಷ್ಟು ಬುದ್ಧಿವಂತಿಕೆಯಿಂದ ತೂಗಿಸುತ್ತಾ ಇದ್ದೇನೆಂಬುದು ನನಗೊಬ್ಬಳಿಗೇ ಗೊತ್ತು! ಅದೂ ಅಲ್ಲದೆ ನೀನು ಈ ಬೆಳೆದ ಹುಡುಗಿಯನ್ನು ಬೇರೆ ಕುತ್ತಿಗೆಗೆ ಉರುಲು ಹಾಕಿಕೊಂಡಿದ್ದಿ. ಹೀಗಿರುವಾಗ ಯಾರುತಾನೇ ನಿನ್ನನ್ನು ವಿಶ್ವಾಸದಿಂದ, ಮನಃಪೂರ್ತಿಯಾಗಿ ಕರೆದು ಇಟ್ಟುಕೊಳ್ಳಲು ಸಿದ್ಧರಿದ್ದಾರೆ? ಅದನ್ನಾದರೂ ಯೋಚಿಸು ನೋಡು. ಅದಕ್ಕೇನೆ ಮಾನ, ಮರ್ಯಾದೆ, ಅಭಿಮಾನ ಅಂತ ಮನಸ್ಸಿನಲ್ಲಿಟ್ಟುಕೊಂಡು ಕುಳಿತಿರುವುದರಿಂದ ಕೆಲಸ ನಡೆಯುವುದಿಲ್ಲ" ಎಂದು ಹೇಳಿದಳು.

ದುರ್ಗಾದೇವಿಯು ಮೆಲುದನಿಯಲ್ಲಿ ನಿದಾನವಾಗಿ ಹೇಳಿದಳು—"ಇಲ್ಲ ಅಕ್ಕ! ನನಗೆಲ್ಲಿಯಮಾನ, ಅಭಿಮಾನ!"

ಸ್ವರ್ಣಮಂಜರಿಯು ಮೈದುನನನ್ನು ಎಡಗೈಯಿಂದ ಪಕ್ಕಕ್ಕೆ ಸರಿಸಿ ತಾನು ಮುಂದೆ ಬಂದು ಹೇಳತೊಡಗಿದಳು—"ನೀನು ಈ ರೀತಿ ಮನಸ್ಸು ಚುಚ್ಚುವ ಮಾತು ಆಡಲು ನಾನೇನು ನಿನಗೆ ಕೆಟ್ಟಮಾತುಗಳನ್ನು ಹೇಳಲಿಲ್ಲ ದುರ್ಗಾ. ನೀನು ಬೇಕಾದರೆ ಕೋಪಿಸಿಕೋ, ತಪ್ಪುತಿಳಿದುಕೋ, ಏನು ಬೇಕಾದರೂ ತಿಳಿದುಕೋ, ನಿನ್ನ ಈ ಸುರಸುಂದರಿಯ, ಅಪ್ಸರೆಯ ಮದುವೆ ಯನ್ನು ಮಾಡಲು ನಮ್ಮಿಂದ ಸಾಧ್ಯವಿಲ್ಲ. ಅನಾಥನ ಹೆಂಡತಿಯ ಹೊಟ್ಟೆ ಯಲ್ಲೂ ಹೆಣ್ಣು ಹುಟ್ಟಿದೆ. ಅವಳ ಮಕ್ಕಳನ್ನು ಒಂದು ಸಲ ನೋಡಿದವರು

ಯಾರುತಾನೆ ಹಾಗೆಯೇ ಕಣ್ಣುಹೊರಳಿಸಿಕೊಂಡು ಹೋದಾರು? ನಾನೇನೋ ಇದ್ದ ವಿಚಾರವನ್ನು ಹೇಳುತ್ತೇನೆ. ಹರಿಪಾಲಪುರಕ್ಕೆ ಹೋಗಿ ನಿಮ್ಮಣ್ಣನಿಗೇ ಗಂಟುಬೀಳು. ನಿನ್ನ ಮಗಳ ಈ ರೂಪ ಸೌಂದರ್ಯಗಳಿಗೆ ಸರಿಹೋಲುವ ಯಾವನಾದರೂ ಹಳ್ಳಿಗಾಡಿನವನು ಸಿಕ್ಕೇ ಸಿಕ್ಕುತ್ತಾನೆ. ಅವನ ಕುತ್ತಿಗೆಗೆ ಕಟ್ಟಿಬಾ. ಅಂದರೆ ಅಲ್ಲಿಗೆಲ್ಲಾ ಮುಕ್ತಾಯವಾಗುತ್ತೆ. ಅದೂ ಅಲ್ಲದೆ ಅಲ್ಲಿಯ ಜನ ರೂಪಗೀಪಗಳನ್ನು ನೋಡುವುದಿಲ್ಲವಂತೆ—ಬರೀ ಹುಡುಗಿಯಾದರೆ ಸಾಕಂತೆ. ಹಾಗೇಂತ ಜನ ಆಡಿಕೊಳ್ಳುವುದನ್ನು ಕೇಳಿದ್ದೇನೆ."

ದುರ್ಗಾದೇವಿಯು ಮೌನದಿಂದಿದ್ದಳು. ಪತಿಯಿಂದ ಬೇಳ್ಕೊಂಡಾಗ ಯಾವ ವಿಷಜ್ವಾಲೆಯ ಕಲ್ಪನೆಯಿಂದ ಹೆದರಿದ್ದಳೋ ಪತಿಯ ಮರಣಾನಂತರ ಅದೇ ವಿಷಜ್ವಾಲೆಯನ್ನು ಹೊಮ್ಮಿಸುವ, ಹಲ್ಲುಗಳಿಂದ ಕಚ್ಚಿಸುವ ಪ್ರಯತ್ನವನ್ನು—ಈ ಉದ್ಧಟತನವನ್ನು ನೋಡಿ ಅವಳು ಭಯದಿಂದ ನಡುಗಿ ಮೌನ ತಾಳಿದಳು.

ಸ್ವರ್ಣಮಂಜರಿಯು ಪುನಃ, "ಯಾರಿಗೆ ಯಾರು ಸಿಕ್ಕುತ್ತಾರೆಯೋ ಅದನ್ನು ಹೇಳಲು ಸಾಧ್ಯವಿಲ್ಲ. ಯಾವನೋ ಒಬ್ಬ ನಿರಕ್ಷರನಿಗೆ, ಹಳ್ಳಿಗಾಡಿನವನಿಗೆ, ನಿನ್ನ ಮಗಳನ್ನು ನೀನು ಲಗ್ನಮಾಡಿಕೊಡುವುದರಿಂದ ನಿನ್ನನ್ನು ಯಾರೂ ಏನೂ ಅನ್ನಲಾರರು – ನಿಂದಿಸಲೂಲಾರರು. ನಾನು ಹಾಗೆ ಮಾಡಿದರೆ ನಿಜವಾಗಿಯೂ ಜನ ಆಡಿಕೊಳ್ಳುತ್ತಾರೆ, ನಿಂದಿಸುತ್ತಾರೆ. ಮೇಲಂತಸ್ತಿನ ಉತ್ತಮ ಪರೀಕ್ಷೆಗಳಲ್ಲಿ ಪಾಸಾಗದವನಿಗೆ ನಾನು ಮದುವೆ ಮಾಡಿಸಿದರೆ ಊರಿನ ಜನರೆಲ್ಲ ನಗಚಾಟಲು ಮಾಡುತ್ತಾರೆ. 'ಇವರೇನು ಇಂತಹ ಕೆಲಸಮಾಡಿಬಿಟ್ಟರು. ಮನೆಯಲ್ಲಿ ಇಂತಹ ದೊಡ್ಡಯಜಮಾನಿ ಇದ್ದೂ ಸಹ ದುರ್ಗಾಪ್ರತಿಮೆಯಂತಹ ಹುಡುಗಿಯನ್ನು ನೀರಿಗೆ ತಳ್ಳಿಬಿಟ್ಟರೆ!' ಅಂತ ಜನ ಆಡುತ್ತಾರೆ. ಅಲ್ಲವೇ, ಅನಾಥು?" ಎಂದು ತನ್ನ ಮೈದುನನ ಕಡೆ ನೋಡಿದಳು.

"ಇದರಲ್ಲಿ ಸುಳ್ಳಾದರೂ ಏನು?" ಎಂದು ಅನಾಥನಾಥನು, ಮಹಾಮಾನನೀಯ ಹಿರಿಯತ್ತಿಗೆಯ ಮರ್ಯಾದೆಯನ್ನು ರಕ್ಷಿಸಿ ಆಫೀಸಿಗೆ ಹೊತ್ತಾಯಿತೆಂಬ ನೆಪವನ್ನು ಮುಂದಿಟ್ಟುಕೊಂಡು ಹೊರಟುಹೋದನು.

"ನಿನ್ನಣ್ಣನ ಕಾಲಿಗಾದರೂ ಬಿದ್ದು ಹೇಗಾದರೂ ಮಾಡಿ ಯಾರಿಗಾದರೂ ಒಬ್ಬನ ಕುತ್ತಿಗೆಗೆ ನಿನ್ನ ಈ ಮಗಳನ್ನು ಕಟ್ಟಿಬಿಡು. ಹೋಗು. ಇದರಲ್ಲಿ ನಾಚಬೇಕಾದ ವಿಚಾರವೇನಿದೆ? ಯಾರೂ ನಿನ್ನನ್ನು ನಿಂದಿಸಲಾರರು. ನಿನ್ನ ಗಂಡನಿಗೆ ತಿಂಗಳಿಗೆ ಮುವ್ವತ್ತು ರೂಪಾಯಿ ಮಾತ್ರ ಬರುತ್ತಿತ್ತು. ಅದೂ ಅಲ್ಲದೆ ಅವನಿಗೆ ಪರಿಚಯಸ್ಥರು ತಾನೆ ಯಾರು? ಇವರುಗಳ ಸಹೋದರನಾದ್ದರಿಂದ ಯಾರಿಗೋ ಕೆಲವರಿಗೆ ಮಾತ್ರ ಗೊತ್ತಿರಬಹುದು. ಅಷ್ಟೆ! ನಾಳೆ ದಿನ ಚೆನ್ನಾಗಿದೆ. ನಾಳೆಯೇ ನಿನ್ನಣ್ಣನ ಊರಿಗೆ ಹೊರಟುಹೋಗು." ಎಂದಳು ಸ್ವರ್ಣಮಂಜರಿ.

ದುರ್ಗಾದೇವಿಗೆ ಅತುಲನ ವಚನವು ಒಮ್ಮೆ ಸ್ಮರಣೆಗೆ ಬಂತು. ಆದರೆ ವಾರಗಿತ್ತಿಯೊಡನೆ ಈ ವಿಚಾರವಾಗಿ ಒಂದು ಮಾತನ್ನೂ ಹೇಳಲಿಲ್ಲ. ಯಾಕೆಂದರೆ ಆ ವಾರಗಿತ್ತಿಯ ಸಂಬಂಧದಿಂದಲೇ ಅತುಲನೊಡನೆ ಈಗ ತನಗೆ ಸಂಬಂಧ ಬೆಳೆದಿರುವುದೆಂಬುದು ಅವಳಿಗೆ ಗೊತ್ತಿದೆ. ಅತುಲನ ತಾಯಿಯು ಸ್ವರ್ಣಮಂಜರಿಯ ಸೋದರಮಾವನ ಮಗಳು.

ಅಂದು ಜ್ಞಾನದಾ ಅತುಲನ ಕಾಲುಗಳಮೇಲೆ ಬಿದ್ದು ರಗಳೆಮಾಡಿದ್ದುದನ್ನು ದುರ್ಗಾದೇವಿಯು ನೋಡಿದ್ದಳು. ಇಂತಹ ಭಾರಿ ವಿಪತ್ತು ಬಂದು ಎದುರಿಗೆ ಕೂತರೂ ಅದಕ್ಕೆ – ಜ್ಞಾನದೆಯ ಆ ವರ್ತನೆಗೆ – ವಿಶೇಷ ಅರ್ಥ ಕಲ್ಪಿಸುವ ಪ್ರಕೃತಿ ಅವಳದಲ್ಲ. ಆದರೆ ದುಃಖಿಗಳ ಮನೆಯಲ್ಲಿ, ಮನಸ್ಸಿನಲ್ಲಿ ಏಕಾಗ್ರತೆಯಿಂದ ಶೋಕಿಸಲು ಸಹ ಅವಕಾಶವಿರುವುದಿಲ್ಲ. ಆದರಿಂದ ಪತಿಯ ಮೃತ್ಯು ಸಂಭವಿಸಿದ ಮಾರನೆಯ ದಿವಸದಿಂದಲೇ ಮಗಳ ಮದುವೆಯ ವಿಚಾರವನ್ನೇ ಯೋಚಿಸುತ್ತಿದ್ದಳು. ಒಳಗೆ ಹೋಗಿ ನೋಡಿದಳು. ಮಗಳು ಸುಮ್ಮನೆ ನೆಲದಮೇಲೆ ಕುಳಿತಿದ್ದಾಳೆ. ಮೆಲ್ಲಮೆಲ್ಲನೆ ತಾಯಿಯು ಅವಳ ಬಳಿಸಾರಿ, "ಅಕ್ಕ ಹೇಳಿದುದನ್ನೆಲ್ಲ ನೀನು ಕೇಳಿದೆಯಾ [illegible] ?" ಎಂದು ಕೇಳಿದಳು.

ಹೌದೆನ್ನುವಂತೆ ಹುಡುಗಿಯು ತಲೆಯಾಡಿಸಿದಳು. ಅವಳೆಲ್ಲವನ್ನೂ ಕೇಳಿದ್ದಳು. ಮುಂದೆ ತಾಯಿಗೆ ಏನು ಹೇಳಬೇಕೆಂಬುದು ತೋಚಲಿಲ್ಲ. ಹುಡುಗಿಯೇ ಮುಂದಿನ ಮಾತುಕತೆಗಳಿಗೆ ಮೊದಲುಮಾಡಿದಳು – "ಇವತ್ತಿನ

ವರೆಗೂ ನೀನು ತವರುಮನೆಗೆ ಹೋಗಿಲ್ಲ. ಈಗೊಂದು ಸಲ ಹೋಗಿ ಬರೋಣವಮ್ಮ."

"ನನ್ನ ತಾಯಿಯು ಈಗ ಜೀವಂತಳಿಲ್ಲ ಮಗು. ಅಣ್ಣನಿದುವರೆಗೂ ಯಾವುದನ್ನೂ ವಿಚಾರಿಸಿಲ್ಲ. ಈ ಭಾರಿ ಸಂಕಟವನ್ನು ಕೇಳಿಯೂ ಸಹ ಒಂದು ಕಾಗದವನ್ನಾದರೂ ಬರೆದಿಲ್ಲ. ನಾನೇ ಹೋಗಿ ಹೇಗೆ ಗಂಟು ಬೀಳಲಿ ನೀನೇ ಹೇಳು? "

" ದುಃಖಿಗಳ ಸಮಾಚಾರವನ್ನು ಯಾರೂ ಹುಡುಕುವುದೂ ಇಲ್ಲ; ಅರಸುವುದೂ ಇಲ್ಲ! ಅವರು ವಿಚಾರಿಸಲಿಲ್ಲ. ಇವರು ವಿಚಾರಿಸುವುದಿಲ್ಲ ವಷ್ಟೇ ಅಲ್ಲ ಇಲ್ಲಿಂದ ಹೊರಟು ಹೋಗಿರೆಂದು ಹೇಳುತ್ತಾರೆ. ನಮ್ಮ ಮಾನ ಅಭಿಮಾನಗಳೆಲ್ಲ ತಂದೆಯವರೊಡನೆಯೇ ಭಸ್ಮವಾಗಿ ಹೋದವು, ಅಮ್ಮಾ! ನಡಿ, ನಾವು ಅಲ್ಲಿಯೇ ಹೋಗಿ ಇರೋಣ."

ತಾಯಿಯ ಕಣ್ಣಿನಲ್ಲಿ ನೀರು ಹರಿಯತೊಡಗಿತು. ಮಗಳು ಸ್ನೇಹ ದಿಂದ ತಾಯಿಯ ಕಣ್ಣೀರೊರೆಸಿ, "ಕೇವಲ ನನಗಾಗಿ ನೀನು ಎಲ್ಲಿಗೂ ಹೋಗಲು ಇಷ್ಟಪಡುವುದಿಲ್ಲ. ಇದು ನನಗೆ ಗೊತ್ತು. ಇಲ್ಲದೆ ಹೋದರೆ ದೊಡ್ಡಮ್ಮನಾಡಿದ ಅಂತಹ ಕಟುವಾಕ್ಯಗಳನ್ನು ಕೇಳಿ ನೀನು ಇಲ್ಲಿ ಒಂದು ಘಳಿಗೆಯೂ ಇರುತ್ತಿರಲಿಲ್ಲ. ನನಗಾಗಿ ನೀನು ಕೊಂಚವೂ ಚಿಂತಿಸಬೇಕಾ ಗುವುದಿಲ್ಲವಮ್ಮ. ನಡಿ, ನಾವು ಕೆಲವು ದಿವಸಗಳವರೆಗಾದರೂ ಎಲ್ಲಿಯಾ ದರೂ ಹೋಗೋಣ. ಇಲ್ಲದಿದ್ದರೆ ನಿನ್ನ ಜೀವ ಉಳಿಯುವಹಾಗಿಲ್ಲ" ಎಂದಳು.

ತಾಯಿಯಿಂದ ಇನ್ನು ಸುಮ್ಮನಿರಲಾಗಲಿಲ್ಲ. ಅವಳು ಮಗಳನ್ನು ಎದೆಗಪ್ಪಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು. ಮಗಳು ತಡೆಯಲೂ ಇಲ್ಲ. ತಾಯಿಯನ್ನು ಸಂತಯಿಸುವ ಪ್ರಯತ್ನವನ್ನೂ ಮಾಡಲಿಲ್ಲ. ಸುಮ್ಮನೆ ತಾಯಿಯ ಎದೆಯಲ್ಲಿ ಮುಖವನ್ನು ಹುದುಗಿಕೊಂಡಿದ್ದಳು. ಬಹಳ ಹೊತ್ತಿನ ಮೇಲೆ ದುರ್ಗಾದೇವಿಯು ಕೊಂಚ ಶಾಂತಳಾಗಿ ಕಣ್ಣೊರೆಸಿಕೊಂಡು, "ನಿಜ ಹೇಳುತ್ತೇನೆ ಮಗು, ನಿನ್ನ ತಂದೆಯವರು ಈ ಲೋಕವನ್ನು ಬಿಟ್ಟು ಹೋದ ದಿವಸವೇ ನನಗೆಲ್ಲಿ ತೋರುತ್ತಿತೋ ಅಲ್ಲಿಗೆ ಹೋಗಿ ಬಿಡುತ್ತಿದ್ದೆ. ಕೇವಲ ನಿನ್ನ ಸಲುವಾಗಿ ಹೋಗಲಿಲ್ಲ." ಎಂದಳು.

"ನನಗಿದು ಚೆನ್ನಾಗಿ ಗೊತ್ತಮ್ಮ."

"ಒಳ್ಳೆಯದು. ನಾನು ನಿನ್ನೊಡನೆ ಒಂದು ಮಾತನ್ನು ಕೇಳುತ್ತೇನೆ. ನಿಜ ಹೇಳು, ಮಗು. ಅಂದು ಅತುಲನು ಆ ಮಾತನ್ನೇಕೆ ಹೇಳಿದ?........ ಈ ರೀತಿ ಮುಖ ಮರೆಸಿಕೊಳ್ಳುವುದು ಸರಿಯಲ್ಲ. ಜ್ಞಾನು, ನಾಚುವುದಕ್ಕೆ ಇದು ಸಮಯವಲ್ಲ. ಆ ಹುಡುಗ ಸುಳ್ಳು ಹೇಳುವವನಲ್ಲವೆಂದು ನನಗೆ ಗೊತ್ತು. ಅವರ ಅಂತ್ಯಕಾಲದಲ್ಲಿ ಅತುಲನೇ ಸ್ವತಃ ಅಂತಹ ಭರವಸೆಯನ್ನೇಕೆ ಕೊಟ್ಟುಹೋದ? ಮತ್ತು ನೀನೂ ಆ ರೀತಿ ಅವನ ಕಾಲುಗಳ ಮೇಲೆಬಿದ್ದು ಅತ್ತು ಕರೆದುದೇಕೆ? ಇದು ನನಗೆ ಗೊತ್ತಾಗಬೇಕು."

ಜ್ಞಾನದಾ, ತಾಯಿಯ ಎದೆಯ ಮೇಲೆ ಮುಖವಿಟ್ಟುಕೊಂಡೇ ಅಸ್ಪಷ್ಟ ಸ್ವರದಲ್ಲಿ, "ಅದೆಲ್ಲಾ ನನಗೆ ಗೊತ್ತಿಲ್ಲ, ಅಮ್ಮಾ!" ಎಂದಿಷ್ಟು ಮಾತ್ರ ಹೇಳಿದಳು.

ದುರ್ಗಾದೇವಿಯು ಬಲವಂತದಿಂದ ಒಮ್ಮೆ ಮುಖವೆತ್ತಿ ನೋಡುವ ಪ್ರಯತ್ನಮಾಡಿದಳು. ಮಗಳು ಬಲವಾಗಿ ತಾಯಿಯ ಎದೆಯಲ್ಲಿ ಮುಖ ಹುದುಗಿಕೊಂಡು ಮುಖ ಮರೆಸಿಕೊಂಡೇ ಇದ್ದಳು. ವಿಫಲ ಮನೋರಥಳಾಗಿ ದುರ್ಗಾದೇವಿಯು ಪುನಃ, "ನಿಮ್ಮ ತಂದೆಯವರು ಜೀವಂತರಿದ್ದಾಗ ಈ ವಿಚಾರವಾಗಿ ನಾನೆಂದೂ ಏನನ್ನೂ ಯೋಚಿಸಿರಲಿಲ್ಲ. ಆದರೆ ಅವರ ಮರಣಾನಂತರ ಹಾಗೆಯೇ ಯೋಚಿಸುತ್ತಾ ಹೋದರೆ ಈಗ ನನಗೆ ಬಹಳ ಮಾತುಗಳು ಅರ್ಥವಾಗುತ್ತವೆ. ಅತುಲನ ಬಾಯಿಂದ ಹೊರಬಿದ್ದ ಎಷ್ಟೋ ಸಣ್ಣ ಪುಟ್ಟ ಮಾತುಗಳು ಇಂದು ನನಗೆ ಜ್ಞಾಪಕಕ್ಕೆ ಬರುತ್ತವೆ" ಎಂದು ಹೇಳುತ್ತ ಹೇಳುತ್ತ ಅವಳು ಇದ್ದಕ್ಕಿದ್ದಂತೆಯೇ ವ್ಯಗ್ರಳಾಗಿ ಮಗಳ ಎರಡೂ ಕೈಗಳನ್ನೂ ತನ್ನೆರಡು ಕೈಗಳಲ್ಲಿ ಹಿಡಿದು ಮತ್ತೆ, "ನಾನೇನು ತಿಳಿದುಕೊಂಡಿದ್ದೇನೋ ಅದು ಹಾಗಾದರೆ ಸುಳ್ಳಲ್ಲ ತಾನೆ? ನಿಜ ಹೇಳು ಮಗು! ನಾನು ಕೆಲವು ದಿನಗಳಿಂದ ಕೇವಲ ಕಲ್ಪನಾ ಸ್ವಪ್ನವನ್ನು ನೋಡಿಲ್ಲ ತಾನೆ?" ಎಂದಳು.

ಜ್ಞಾನದಾ ಮೊದಲಿನಂತೆಯೇ ಮುಖ ಮುಚ್ಚಿಕೊಂಡು ಕೋಮಲ ಸ್ವರದಲ್ಲಿ, "ನನಗೇನು ಗೊತ್ತು, ಅಮ್ಮಾ? ಅವರ ಧರ್ಮ ಅವರ ಕೈಯ್ಯಲ್ಲಿದೆ. ಅವರಿಗೇ ಗೊತ್ತು; ಅವರ ಧರ್ಮಕ್ಕೇ ಗೊತ್ತು!" ಎಂದಳು.

ತಾಯಿಯು ಆನಂದದಿಂದ ಅಧೀರಳಾಗಿ ಅಶ್ರುಪೂರಿತಳಾಗಿ, "ನನ್ನನ್ನು ಸಂಶಯದಲ್ಲಿ ತಳ್ಳಿ ಹೆಚ್ಚು ಕಷ್ಟಕೊಡಬೇಡ ಮಗು, ಒಂದುಸಲ ಮನಬಿಚ್ಚಿ ಹೇಳಿಬಿಡಮ್ಮಾ. ಅದನ್ನು ಕೇಳಿ ನಾನು ನಿಶ್ಚಿಂತಳಾಗಿ, ನಿನ್ನ ತಂದೆಯ ವರಿಗಾಗಿ ಒಂದು ಸಲ ಮನಪೂರ್ತಿಯಾಗಿ ಅಳುವೆನು. ನನ್ನ ಇಂದಿನ ಅಳುವು ಅವರಿಗೆ ಖಂಡಿತ ಕೇಳಿಸುತ್ತದೆ." ಎಂದಳು.

ಮಗಳು ಮೆಲ್ಲಗೆ ಉಸುರಿದಳು– "ಅಳು, ಅಮ್ಮಾ ಅಳು! ಬೇಕಾದಷ್ಟು ಅಳು. ನಾನು ನಿನ್ನನ್ನು ತಡೆಯುವುದಿಲ್ಲ. ನಾನು ತಂದೆಯವರಿಗೆ ತಿಳಿಯ ಹೇಳಲು ಅವರನ್ನು ಬೇಡಿದ್ದೆ. ಅವರೇ ಸ್ವತಃ ತಂದೆಯವರಿಗೆ ತಮ್ಮ ಪ್ರತಿಜ್ಞೆಯನ್ನು ತಿಳಿಸಿದರು. ಇನ್ನು ಅವರ ಧರ್ಮದ ರಕ್ಷಣೆ ಮಾಡಿಕೊಳ್ಳು ವುದು ಅವರ ಕೈಯ್ಯಲ್ಲಿದೆ."

ದುರ್ಗಾದೇವಿಯಿಂದ ಈ ಸಲ ಯಾವ ಅಡ್ಡಿಯನ್ನೂ ಪರಿಗಣಿಸಲಾಗ ಲಿಲ್ಲ. ಅವಳು ಕೂಡಲೇ ಮಗಳ ಲಜ್ಜಾವೃತ, ಹಾಗೂ ಕಣ್ಣೀರಿನಿಂದ ಒದ್ದೆ ಯಾದ ಮುಖವನ್ನು ಮೇಲಕ್ಕೆತ್ತಿ ಅಸಂಖ್ಯಾತ ಚುಂಬನಗಳನ್ನು ಅಂಕುರಿ ಸಿದಳು. ಮತ್ತೆ ಅದೇ ರೀತಿ ಎದೆಗವುಚಿಕೊಂಡು ಅವಳು ಬಹಳ ಹೊತ್ತಿನ ವರೆಗೆ ಸುಮ್ಮನೆ ಕಣ್ಣೀರು ಹರಿಸುತ್ತಿದ್ದಳು. ಆಮೇಲೆ ಕಣ್ಣೊರೆಸಿಕೊಂಡು ನಿದಾನವಾಗಿ ಹೇಳತೊಡಗಿದಳು—"ಸರಿ ಮಗು, ಅದೇ–ಅದೇಸರಿ. ನನ್ನ ಅತುಲ ಸಾವಿರ ವರ್ಷ ಬದುಕಲಿ. ಅವನ ಧರ್ಮ ಅವನ ಕೈಯಲ್ಲಿದೆ. ಆದರೆ ನೀನು ಅತುಲನನ್ನು ಒಂದು ಸಲ ಮೃತ್ಯುವಿನ ಬಾಯಿಂದ ಬದುಕಿಸಿ ದ್ದೀಯೆಂಬುದು ಇಂದಿನವರೆಗೂ ನಮ್ಮಲ್ಲಿ ಯಾರ ಮನಸ್ಸಿನಲ್ಲೂ ಮೂಡಿರ ಲಿಲ್ಲ. ಆ ವರುಷ ಅದೆಂತಹುದೋ ವಿಕಟ ಖಾಯಿಲೆ–ಬಾರ್‌ಬರೀ ಖಾಯಿಲೆ ಯಂತೆ. ದೇಶದಲ್ಲೆಲ್ಲ ಹಬ್ಬಿಬಿಟ್ಟಿತ್ತು. ಹೋಗಲಿ ಬಿಡು ಅದ್ಯಾವರೋಗವೋ? ಅದೇ ರೋಗವೇ ಮೊದಲು ಅತುಲನ ತಾಯಿಗೆ ಬಂತು. ನಂತರ ಅತುಲ ನಿಗೂ ಬಂತು. ಅದು ಬಂತೆಂದರೆ ಮೊದಲು ಮೈಯಲ್ಲೆಲ್ಲ ಊದಿಬಿಡುತ್ತಿತ್ತು. ಮತ್ತೆ ಅದೇ ಹಾಗೆಯೇ ಒಡೆದು ಹುಣ್ಣಾಗಿಬಿಡುತ್ತಿತ್ತು. ಅತುಲನು ಬದು ಕುವ ಯಾವ ಆಸೆಯೂ ಇರಲಿಲ್ಲ. ಕೊಳೆತ ಆ ಹುಣ್ಣುಗಳಿಂದ ನಾರುವ ಕೀವು ರಕ್ತಗಳು ಹೊಮ್ಮುತ್ತಿದ್ದವು. ಆ ದುರ್ನಾಥವನ್ನು ಸಹಿಸಲು ಸಾಧ್ಯವೇ ಇರಲಿಲ್ಲ. ಆಗ, ನೀನು ಕೇವಲ ಚಿಕ್ಕ ಹುಡುಗಿಯಾಗಿದ್ದರೂ ಸಹ ಹಗಲು

ರಾತ್ರಿ ಯಮರಾಜನೊಡನೆ ಯುದ್ಧ ಮಾಡಿ, ಸದಾಕಾಲದಲ್ಲಿಯೂ ಅವನ್ನು ನೋಡಿಕೊಂಡು, ಸೇವೆಮಾಡಿ, ಬಹಳ ಕಷ್ಟ ಸಹಿಸಿ, ಕಣ್ಣಿಗೆ ನಿದ್ದೆಯಿಲ್ಲದೆ, ಜೀವದ ಹಂಗು ತೊರೆದು ಅತುಲನನ್ನು ಬದುಕಿಸಿದ್ದೆ. ಆ ಧರ್ಮವನ್ನು ಅವನೆಂದಾದರೂ ಉಪೇಕ್ಷೆ ಮಾಡಿಯಾನೆಯೇ ? ಸಾವಿತ್ರಿಯಂತೆ ನೀನೂ ಅತುಲನನ್ನು ಯಮರಾಜನಿಂದ ಕಸಿದುಕೊಂಡು ಬಂದಿದ್ದೀಯೆ. ಇಂತಹ ನಿನ್ನನ್ನು ಭಗವಂತನು ಬೇರೆ ಯಾರಕೈಯಲ್ಲಾದರೂ ಇಟ್ಟಾನೆಯೆ ? ಈ ಧರ್ಮವು ಉಳಿಯದಿದ್ದರೆ ಈ ಪ್ರಪಂಚವೇ ಹಾಳಾಗಲಿ !"

ಕೊಂಚಹೊತ್ತು ಸುಮ್ಮನಿದ್ದು ಪುನಃ ಪುಳಕಿತಳಾಗಿ, "ಇನ್ನು, ನೀನು ನನ್ನನ್ನು ಎಲ್ಲಿಗೆ ನಡೆಯೆಂದರೆ ಅಲ್ಲಿಗೆ ಹೋಗಲು ಸಿದ್ಧಳಿದ್ದೇನೆ. ಆದರೆ ನೀನು ಮಾತ್ರ ಇನ್ನುಮೇಲೆ ಅತುಲನನ್ನು ಕೇಳದೆ, ಅವನ ಅನುಮತಿ ಇಲ್ಲದೆ ಎಲ್ಲಿಗೂ ಹೋಗುವಹಾಗಿಲ್ಲ, ಮಗು. ನೀನು ಹೇಳಿದ್ದೇ ಸರಿ.... ....ಹೌದು, ಹೌದು, ಅದಕ್ಕೇ ನನ್ನಮಗು—ನನ್ನ ಅತುಲ—ಊರಿನಿಂದ ಹಿಂತಿರುಗಿ ಬೆಳಗಾಗುವುದೇ ಕಾದಿದ್ದು ಬಳೆಗಳನ್ನು ಕೊಡುವ ನೆಪಮಾಡಿ ಕೊಂಡು ನಿನ್ನನ್ನು ನೋಡಲು ಓಡಿಬಂದಿತ್ತು. ಅಯ್ಯೋ, ನನ್ನ ದೇವರೆ, ನೀವಿನ್ನೊಂದು ವರ್ಷ ಬದುಕಿದ್ದರೆ ಕಣ್ಣಿಂದ ಈ ಶುಭೋತ್ಸವವನ್ನು ನೋಡಿ ಹೋಗುತ್ತಿದ್ದರೇ ?" ಎಂದು ಹೇಳುತ್ತ ಉದ್ವೇಗದ ಕಣ್ಣೀರಿನ ರಭಸವನ್ನು ಸೆರಗಿನಿಂದ ಒತ್ತಿ ಹಿಡಿದಳು.

" ದುರ್ಗಾ, ಲೇ, ದುರ್ಗಾ !"

ದುರ್ಗಾದೇವಿಯು ಥಟ್ಟನೆ ಮಗಳನ್ನು ದೂರಸರಿಸಿ ಕಣ್ಣೊರಸಿಕೊಂಡು "ಏನಕ್ಕಾ ?" ಎಂದು ಕೇಳಿದಳು.

ಸ್ವರ್ಣಮಂಜರಿಯು ಒಂದು ಸಲ ಒಳಕ್ಕೆ ದೃಷ್ಟಿಹೊರಳಿಸಿ, ಕಠಿಣ ಸ್ವರದಲ್ಲಿ, "ನಿಮ್ಮ ಈ ಶೋಕಾಕುಲ ಶರೀರಕ್ಕೆ ಹಸಿವು ಬಾಯಾರಿಕೆಗಳು ಪೀಡಿಸುವುದಿಲ್ಲವೆಂಬುದನ್ನು ಒಪ್ಪಿಕೊಂಡೆ. ಆದರೆ ಮನೆಯ ಇತರರು ಉಪವಾಸ ಇರಲಾರರು. ಕೊಂಚ ಕೊಠಡಿಯ ಹೊರಕ್ಕೆ ಬಂದುನೋಡು ಹೊತ್ತೆಷ್ಟು ಏರಿದೆಯೆಂಬುದು ಗೊತ್ತಾಗುತ್ತದೆ !" ಎಂದಳು.

ದುರ್ಗಾದೇವಿಯು ಗಾಬರಿಯಿಂದ ಕೋಡಿಯ ಹೊರಕ್ಕೆ ಬಂದಳು. ಹೊತ್ತೇರಿರುವುದನ್ನು ನೋಡಿ ಲಜ್ಜಿತಳಾಗಿ ಮಗಳ ನೆಪಮಾಡಿಕೊಂಡು ಏನೇನೋ ಸಬೂಬು ಸಮಾಧಾನಗಳನ್ನು ಹೇಳಲು ಮೊದಲುಮಾಡಿದೊಡನೆಯೇ ಸ್ವರ್ಣಮಂಜರಿಯು ತೀಕ್ಷ್ಣ ಸ್ವರದಲ್ಲಿ, "ಸರಿಯೇ! ಯಾರು ಬೇಡಾಂದರು? ಅಡಿಗೆಯಮನೆಯ ಕೆಲಸವನ್ನಷ್ಟು ಪೂರೈಸಿಕೊಂಡು ಬಂದು ಮಗಳನ್ನು ತೊಡೆಯಮೇಲೆ ಕೂಡಿಸಿಕೊಂಡು ಬೇಕಾದಷ್ಟು ಉಪದೇಶ ಹೇಳು— ನಾನೊಂದುಮಾತನ್ನೂ ಆಡುವುದಿಲ್ಲ. ನೀನು ಹೀಗೆ ಸುಮ್ಮನೆ ಕುಳಿತಿರುವುದರಿಂದ ನನ್ನ ಮಕ್ಕಳು ಮರಿ ಎಲ್ಲಾ ಹಸಿದು ಸಾಯುತ್ತಾ ಇವೆ. ಇಲ್ಲಪ್ಪಾ ಇಲ್ಲ—ಇಂತಹ ವಿಚಿತ್ರಗಳನ್ನೆಲ್ಲ ಸಹಿಸುವುದಕ್ಕೆ ನನ್ನಿಂದ ಖಂಡಿತ ಸಾಧ್ಯವಿಲ್ಲ. ಹೇಳಿದೀನಿ ನೋಡು!" ಎಂದು ಒದರಿದಳು.

ಇಷ್ಟು ಹೇಳಿ ಸಂತಾನಹೀನ ಸ್ವರ್ಣಮಂಜರಿಯು ಚಿಕ್ಕ ವಾರಗಿತ್ತಿಯ ಮಕ್ಕಳು ಮರಿಗಳಮೇಲೆ ತನಗಿರುವ ಮಾತೃಪ್ರೇಮದ ಪರಮಾವಧಿಯನ್ನು ಪ್ರದರ್ಶಿಸಿ ಉತ್ತರದ ಪ್ರತೀಕ್ಷೆಯನ್ನು ಸಹ ಮಾಡದೆ ಅಲ್ಲಿಂದ ಹೊರಟು ಹೋದಳು.

ಅನಾಥನಾಥನ ಕುಟುಂಬದಲ್ಲಿ ಪುನಃ ಪ್ರವೇಶಿಸಿದ ಒಡನೆಯೇ ದುರ್ಗಾದೇವಿಯು ಅಡಿಗೆಯಮನೆಯ ಪಶಿಷ್ಟ ಭಾರವನ್ನು ವಹಿಸಿಕೊಳ್ಳಲೇಬೇಕಾಯಿತು. ಅದರಿಂದ ಹಿರಿಯ, ಕಿರಿಯ ವಾರಗಿತ್ತಿಯರಿಗೆ ಸಂಪೂರ್ಣ ರಜ ದೊರೆಯಿತು. ಒಬ್ಬಳು ಊರೆಲ್ಲಾ ಗಸ್ತುಹೊಡೆಯುತ್ತಾ, ಮನೆಯಲ್ಲಿ ಖರ್ಚು ಬಹಳ ಹೆಚ್ಚಿಹೋಯಿತೆಂದು ಸದಾ ಕಾದಾಡುವುದರಲ್ಲಿ ಕಾಲಕಳೆಯುತ್ತಿದ್ದಳು. ಇನ್ನೊಬ್ಬಳು ಸದಾ ಮಲಗಿ, ಕಥೆ ಕಾದಂಬರಿಗಳನ್ನೋದಿಕೊಂಡು ಸಣ್ಣ ಪುಟ್ಟ ಚಾಡಿಗಳಿಗೆಲ್ಲಾ ಜಗಳವಾಡುತ್ತಾ ದಿನಗಳನ್ನು ಕಳೆಯುತ್ತಿದ್ದಳು.

ಅನಾಥನಾಥನು ಕಲ್ಕತ್ತೆಯಲ್ಲಿ ನೌಕರಿ ಮಾಡುತ್ತಿದ್ದ. ಕಛೇರಿಯ ಹೊತ್ತಿಗೆ ಸರಿಯಾಗಿ ದಿನಾ ಒಂದು ಪ್ಯಾಸೆಂಜರ್ ಓಡಾಡುತ್ತಿತ್ತು. ಆದರಿಂದ ಅವನು ಪ್ರತಿ ನಿತ್ಯ ಬೆಳಗ್ಗೆ ಎಂಟೂವರೆ ಗಂಟೆಗೆ ಹೊರಟು ಹೋಗುತ್ತಿದ್ದ. ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ಯಥಾಸಮಯದಲ್ಲಿ ಅವನಿಗೆ ಅಡಿಗೆಮಾಡಿ

ಬಡಿಸುವುದು ಘೋರ ಅಶಾಂತಿಯುಕ್ತವಾದ ಒಂದು ನಿತ್ಯ ಕೆಲಸವಾಗಿತ್ತು! ಈ ವಿಚಾರದಲ್ಲಿ ಹಿರಿಯ ಕಿರಿಯ ವಾರಗಿತ್ತಿಯರಲ್ಲಿ ಆಗಾಗ್ಗೆ ಮಾತುಕತೆ ಗಳೇಳುತ್ತಿದ್ದವು; ಮನಸ್ತಾಪವುಂಟಾಗುತ್ತಿದ್ದಿತು. ಈಚೆಗೆ ಕೆಲವು ದಿವಸ ಗಳಿಂದ, ಅಂದರೆ ಅಡಿಗೆಯ ಮನೆಯ ಸಂಪೂರ್ಣ ಜವಾಬ್ದಾರಿಯು ದುರ್ಗಾ ದೇವಿಯ ಮೇಲೆ ಬಿದ್ದಾಗಿನಿಂದ ಈ ಜಗಳಗಳಿಂದ ಬಿಡುಗಡೆಯಾಗಿ ಪುನಃ ಬಹು ದಿನಾನಂತರ, ಒಬ್ಬರಲ್ಲಿನ್ನೊಬ್ಬರಿಗೆ, ಬಳಕೆ, ಸ್ನೇಹದ ಮಾತುಗಳಾಗಿ, ಪ್ರೇಮವು ಅಂಕುರಿಸಿ ಬಂಧಿಸುತ್ತಿದ್ದ ಸೂಚನೆ ಕಂಡುಬಂದಿತ್ತು. ಆದರೆ ಇಂದು ಇದ್ದಕ್ಕಿದ್ದಹಾಗೆಯೇ ಆ ಪ್ರೀತಿಬಂಧನವು ಮತ್ತೊಮ್ಮೆ ಕಡಿದು ಹೋಗುವ ಉಪಕ್ರಮವು ಜರುಗಿತು. ಕಾರಣವಿಷ್ಟೇ! ಏಳು ಗಂಟೆ ಹೊಡೆ ಯುವ ಹೊತ್ತು. ದಾಸಿಯು ಬಂದು, ಆಗ ತಾನೆ ನಿದ್ರೆತಿಳಿದು ಹಾಸಿಗೆ ಯಿಂದೆದ್ದು ಕುಳಿತಿದ್ದ ಕಿರಿಯ ವಾರಗಿತ್ತಿಗೆ, "ಕುಮಟಿಗೆ ಇದ್ದಲು ಹಾಕಿ ಹೊತ್ತಿಸಿದ್ದಾಯಿತು, ಆರಿಹೋದಾತು. ಕೂಡಲೇ ಅಡಿಗೆಗೆ ಎಸರಿಡುವ ಏರ್ಪಾಡುಮಾಡಿದರೆ ಒಳ್ಳೆಯದು" ಎಂಬ ಸೂಚನೆ ಕೊಟ್ಟಳು.

ಕಿರಿಯ ವಾರಗಿತ್ತಿಯು ಕೋಪದಿಂದ, "ಏಕೆ? ದುರ್ಗಕ್ಕ ಏನುಮಾಡು ತ್ತಿದ್ದಾರೆ? ಏಳು ಗಂಟೆಯಾದರೂ ಇನ್ನೂ ಪ್ರಜ್ಞೆ ಇಲ್ಲದೆ ಬಿದ್ದುಕೊಂಡಿ ದಾರೆಯೋ?" ಎಂದಳು.

"ಪ್ರಜ್ಞೆಯಿಲ್ಲದೆ ಮಲಗಿದ್ದಾರೇಕೆ? ತಾಯಿ ಮಗಳಿಬ್ಬರೂ ಬೆಳಗ್ಗೆ ಹೊತ್ತಿಗೆ ಮುಂಚೆಯೇ ಎದ್ದು ತಮ್ಮ ಸಾಮಾನುಗಳನ್ನೆಲ್ಲಾ ಸರಿಮಾಡಿ ಕೊಂಡು ಗಂಟುಮೂಟೆ ಕಟ್ಟುತ್ತಿದ್ದಾರೆ. ಈಗಿನ ಎಂಟು ಗಂಟೆಯ ಗಾಡಿ ಯಲ್ಲಿ ಹರಿಪಾಲಪುರಕ್ಕೆ ಹೋಗುತ್ತಾರಂತೆ."

ಕಿರಿಯವಳಿಗೆ ಹಿಂದಿನ ದಿನದ ಮಾತುಗಳು ಜ್ಞಾಪಕವಾದವು. ಆದರೆ ಅವಳು ಕೊಂಚವೂ ಪ್ರಸನ್ನಳಾಗದೆ ಗಟ್ಟಿಯಾಗಿ, "ಹೊರಟು ಬಿಡುವುದು ಎಂದರೆ ಏನು ತಮಾಷೆಯೆ ನೆನೆಸಿಕೊಂಡ ತಕ್ಷಣ ಹೊರಟು ಬಿಡುವುದಕ್ಕೆ! ರಾಯರ ಅಪ್ಪಣೆ ಪಡೆದಿದ್ದಾರೇನು? ಅಕ್ಕನಿಗೆ ಹೇಳಿದ್ದಾರೇನು?" ಎಂದಳು.

"ರಾಯರ ವಿಚಾರ ನನಗೇನೂ ಗೊತ್ತಿಲ್ಲ ತಾಯಿ, ಆದರೆ ದೊಡ್ಡಮ್ಮಾ ವರೇ ಅವರಿಗೆ ಇವತ್ತು ಹೊರಟುಹೋಗುವುದಕ್ಕೆ ಹೇಳಿದ್ದರು. ಅದು ನನಗೆ ಗೊತ್ತು."

"ಸರಿ ಹಾಗಾದರೆ ದೊಡ್ಡಮ್ಮಾವರಿಗೆ ಹೇಳು. ಎಂಟೂವರೆ ಗಂಟೆಗೆ ಸರಿಯಾಗಿ ರಾಯರಿಗೆ ಅಡಿಗೆಮಾಡಿ ಬಡಿಸಲಿ. ನನಗೊಂದೂ ತಿಳಿಯದು." ಎಂದು ಅವಳು ಬೆಂಕಿ ಬೆಂಕಿಯಾಗಿ, ಇದ್ದಲುಪುಡಿ ಮಿಶ್ರವಾದ ಸುಟ್ಟ ತಂಬಾಕಿನ ಪುಡಿಯನ್ನು ಹಲ್ಲುಜ್ಜಲೋಸುಗ ಬಾಯಿಗೆ ಹಾಕಿಕೊಂಡು, ಹೆಗಲ ಮೇಲೆ ಟವಲು ಹಾಕಿಕೊಂಡು ಸ್ನಾನಮಾಡುವ ಸಲುವಾಗಿ ಮನೆಗೆ ಹೊಂದುಕೊಂಡಿದ್ದ ಕೊಳದ ಕಡೆಗೆ ಶೀಘ್ರವಾಗಿ ಹೊರಟು ಹೋದಳು.

" ದೊಡ್ಡಮ್ಮಾವರು ಮನೆಗೆ ಬಂದಕೂಡಲೇ ಹೇಳುತ್ತೇನೆ! ಅವರು ಸ್ನಾನಮಾಡುವುದಕ್ಕೆ ಗಂಗಾನದಿಗೆ ಹೋಗಿದ್ದಾರೆ " ಎಂದು ದಾಸಿಯು ತನ್ನ ಕೆಲಸಕ್ಕೆ ಹೊರಟು ಹೋದಳು.

ಕಿರಿಯುವಳು ಜಾಗ್ರತೆ ಸ್ನಾನ ಮುಗಿಸಿಕೊಂಡು ಹಿಂತಿರುಗಲೇಬೇಕಾಗಿ ಬಂತು. ಏಕೆಂದರೆ ಕಛೇರಿಯ ದೊಡ್ಡಸಾಹೇಬರು ಅವಳ ಮುನಿಸನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಈಗ ಉಳಿದಿರುವುದು ಎರಡೇ ಉಪಾಯ. ಎಷ್ಟಾಗುವುದೋ ಅಷ್ಟನ್ನು ಮಾಡಿ ಗಂಡನಿಗೆ ಬಡಿಸುವುದು. ಇಲ್ಲವೇ ಹಸಿದ ಹೊಟ್ಟೆಯಲ್ಲಿ ಅವನು ಹೊತ್ತಾಗುತ್ತಲೂ ಹೊರಟೇ ಬಿಡುವುದು. ಸ್ನಾನಮಾಡಿ ಹಿಂತಿರುಗಿದ ಅವಳು ದುರ್ಗಾದೇವಿಯ ಕೊಠಡಿಯ ಬಾಗಿಲಲ್ಲಿ ನಿಂತು ತೀಕ್ಷ್ಣ ಸ್ವರದಲ್ಲಿ, "ಹೋಗುವುದೇನೋ ಹೋಗುತ್ತೀರಿ. ಆದರೆ ಈ ದುಷ್ಟತನ ಪ್ರಕಟಮಾಡದೆ ಹಾಗೆಯೇ ಹೋದರೆ ಒಗರೇನು ದುರ್ಗಕ್ಕ?" ಎಂದಳು.

ಈ ಅಕಸ್ಮಿಕ ಆಕ್ರಮಣವನ್ನು ನೋಡಿ ದುರ್ಗಾದೇವಿಯು ಅವಾಕ್ಕಾದಳು.

"ನೀವು ಬೆಳಗ್ಗೆಯೇ ಹೊರಟು ಹೋಗುವಿರೆಂದು ನಾವು ತಿಳಿದಿರಲಿಲ್ಲ. ದೊಡ್ಡಕ್ಕ ಗಂಗಾನದಿಗೆ ಸ್ನಾನಕ್ಕೆ ಹೋಗಿದ್ದಾರೆ. ಇನ್ನೂ ನಾನು ಈಗ ತಾನೆ ಎದ್ದಿದೀನಿ. ಅವರಿಗೆ ಹೊತ್ತಿಗೆ ಸರಿಯಾಗಿ ಊಟ ಹೇಗೆ ಆಗಬೇಕು ಹೇಳಿ?"

"ನಮಸ್ಕಾರ ಚಿಕ್ಕತ್ತೆ! ಅತ್ತೆ, ನಮಸ್ಕಾರ!"

ಕಿರಿಯ ವಾರಗಿತ್ತಿಯು ಹಿಂತಿರುಗಿ ಅತುಲನ ಕಡೆ ನೋಡಿ, "ನೀನು ಈಗ ಇದ್ದಕಿದ್ದ ಹಾಗೆಯೇ ಬಂದುಬಿಟ್ಟೇದಿಯಲ್ಲ ಅತುಲ! ಅದೇನು ?" ಎಂದು ಕೇಳಿದಳು.

ಅತುಲನು ಆ ಸಮಯದಲ್ಲಿ ಕಲ್ಕತ್ತೆಯಲ್ಲಿದ್ದ. ದುರ್ಗಾದೇವಿಯ ಕಾಗದವನ್ನು ನೋಡಿ ಒಂದೇ ಉಸಿರಿನಲ್ಲಿ ಅದೇ ತಾನೆ ಬಂದು ಊರು ಸೇರಿದ್ದ. ಇನ್ನು ವರೆಗೂ ತನ್ನ ಮನೆಗೆ ಸಹ ಹೋಗಿರಲಿಲ್ಲ.

"ಬೆಳಗ್ಗೆಯೇ ಅತ್ತೆ ಮುಂತಾದವರು ಹರಿಪಾಲಪುರಕ್ಕೆ 'ಗಂಗಾ ಯಾತ್ರೆ'* ಗಾಗಿ ಹೊರಟಿದ್ದಾರೆ. ಹೀಗಿರುವಾಗ ನಾನು ಒಂದು ಸಲ ವಾದರೂ ಕಡೆಯಭಾರಿ ಭೇಟಿಮಾಡಿ ಹೋಗಬಾರದೇನು ? ಅದು, ಸರಿಯೇ ನಿನಗೇಕೇ ಈ ಸಣ್ಣವಯಸ್ಸಿನಲ್ಲೇ ಈ ಸುಬುದ್ಧಿ ಬಂತು ಅತ್ತೆ? ಹೇಳ ಬಾರದೆ ? ಓ – ಸರಿ, ಆಗಲೇ ಸಾಮಾನು ಗೀಮಾನು ಎಲ್ಲಾ ಕಟ್ಟಿ ಸಿದ್ಧ ವಾಗಿ ಬಿಟ್ಟಿದೆ!"

ಅವನು ನಗು ನಗುತ್ತಾ ಕೊಠಡಿಯೊಳಕ್ಕೆ ದೃಷ್ಟಿ ಬೀರುತ್ತಲೇ ಒಂದು ಮೂಲೆಯಿಂದ ಅಶ್ರುಪೂರ್ಣ ಕೆಂಗಣ್ಣುಗಳಿಂದ ತಂತಿ ಬಂತು. ಅವಾಕ್ಕಾಗಿ ತಡೆದು ನಿಂತ.

"ನಿನಗೆ ಈ ವಿಚಾರ ಹೇಗೆ ಗೊತ್ತಾಯಿತು ಅತುಲ?" ಅವನ ಚಿಕ್ಕತ್ತೆ ಕೇಳಿದಳು.

"ನನಗೆ........ಹ್ಹ....ಹ್ಹ....ಹ್ಹ........" ಎಂದು ಅತುಲನು ತನ್ನ ಉತ್ತರವನ್ನು ಮುಗಿಸಿದ.

ಇದ್ದಕ್ಕಿದ್ದ ಹಾಗೆಯೇ ಪಡಸಾಲೆಯ ಯಾವುದೋ ಒಂದು ಸ್ಥಾನದಿಂದ ಗಂಗಾಸ್ನಾನಮಾಡಿ ಹಿಂತಿರುಗಿದ ಸ್ವರ್ಣಮಂಜರಿಯ ಕಂಠಸ್ವರವು ಶಬ್ದ ಭೇದಿ ಬಾಣದಂತೆ ಪ್ರವೇಶಿಸಿ ಪ್ರತಿಯೊಬ್ಬರ ಕಿವಿಯಲ್ಲಿಯೂ ನೆಟ್ಟು ನಿಂತಿತು. ಗಂಗಾ ಸ್ನಾನಮಾಡಿ, ಶಾಂತಳಾಗಿ, ಶುಚಿಯಾಗಿ ಅವಳು ಮನೆಯೊಳಗೆ

---

* ಬಂಗಾಲಿಯರಲ್ಲಿ ಯಾರದ್ದಾದರೂ ಮರಣವು ತೀರ ಅನಿವಾರ್ಯ ಹಾಗು ಸಮೀಪಗತವಾಗಿದೆ ಎಂದು ಕಂಡುಬಂದರೆ ಅವರನ್ನು ಗಂಗಾ ತಟಕ್ಕೆ ತೆಗೆದುಕೊಂಡು ಹೋಗುವ ರೂಢಿಯಿದೆ. ಈ ಕಟ್ಟಕಡೆಯ ಯಾತ್ರೆಯೇ 'ಗಂಗಾಯಾತ್ರೆ'

ಕಾಲಿಡುತ್ತಿದ್ದಹಾಗೆಯೇ ದಾಸಿಯು, ಬೆಂಕಿ ಹೊತ್ತಿಸಿ ಅಡಿಗೆಗೆ ಎಸರಿಡದೆ ಅದು ಕಳಲಿಹೋಗುವ ಸ್ಥಿತಿಗೆ ಬಂದಿರುವ ಸಮಾಚಾರವನ್ನು ವೇದ್ಯಮಾಡಿಬಿಟ್ಟಳು. ಸಾಕು ಅಷ್ಟೇ! ದುರ್ಗಾದೇವಿಗೆ ಹೊಸದಾಗಿ ಪ್ರಾಪ್ತವಾದ ವೈಧವ್ಯಕ್ಕೆ ಯಥಾರ್ಥ ಕಾರಣಗಳನ್ನು ಮುಕ್ತಕಂಠದಿಂದ ಉದ್ಘೋಷಿಸುತ್ತಾ ಸ್ವರ್ಣಮಂಜರಿಯು ಬಾಗಿಲಬಳಿ ಪ್ರತ್ಯಕ್ಷವಾದಳು. ಅವಳು ಹೇಳಿದ್ದರ ಸಾರಾಂಶವಿಷ್ಟೆ—"ನಾಲ್ಕು ಕಡೆಯೂ ಅಧರ್ಮ ಪೂರ್ಣವಾಗದೆ ಭಗವಂತನು ಯಾರನ್ನಾದರೂ ಹೀಗೆ ಸರ್ವನಾಶಮಾಡುತ್ತಾನೇನು? ಎಂದೂ ಮಾಡುವುದಿಲ್ಲ. ಹಾಗೆ ಮಾಡಿದರೆ ಅದು ಅಧರ್ಮವಾಗುವುದೆಂದು ಅವನಿಗೆ ಗೊತ್ತಿಲ್ಲವೇ?" ನಂತರ ಒಂದುಕಾಲನ್ನು ಬಾಗಿಲಿನಿಂದ ಒಳಗಿಟ್ಟು, "ನಿನ್ನ ಆಶಯ ಇಷ್ಟೇತಾನೆ ದುರ್ಗಾ? ಊಟ ತಿಂಡಿಯಿಲ್ಲದೆ ಅನಾಥನಾಥನು ಕಛೇರಿಗೆ ಹೋಗಲಿ. ಸಾಯಂಕಾಲ, ಪಿತ್ತವಾಗಿ ಜ್ವರ ಬಂದು ಅವನು ಮನೆಯಲ್ಲಿ ಹಾಸಿಗೆ ಹಿಡಿಯಲಿ. ಇಷ್ಟಾದಮೇಲೆ ತನ್ನಂತೆಯೇ ಇನ್ನೊಬ್ಬರಿಗೂ ಸರ್ವನಾಶವಾಗಲಿ ಎಂದು ತಾನೆ" ಎಂದಳು.

ದುರ್ಗಾದೇವಿಯು ನಡುಗಿಬಿಟ್ಟಳು. "ಪೂರ್ವಾರ್ಜಿತ ಕರ್ಮದಿಂದ ಯಾರಿಗಾದರೂ ಇಂತಹ ಸ್ಥಿತಿ ಉಂಟಾಗುವುದು ನಿಜ. ಆದರೂ ಅಂತಹವರು ಎಂದಿಗೂ ತಮ್ಮ ಅತ್ಯಂತ ಭಾರಿ ಶತ್ರುವಿಗೆ ಕೂಡ ಅಂತಹ ಸ್ಥಿತಿ ಬರಲೆಂದು ಆಶಿಸುವುದಿಲ್ಲ ಅಕ್ಕ! ನಿನಗೆ ನಾನೇನು ತೊಂದರೆಕೊಟ್ಟಿದ್ದೇನೆ? ಏನು ಕೆಟ್ಟದ್ದನ್ನು ಬಯಸಿದ್ದೇನೆ? ಯಾವ ಕೆಡಕನ್ನು ಮಾಡಿದ್ದೇನೆ? ಈ ರೀತಿ ಪ್ರತಿದಿನವೂ ಕೂತರೆ ನಿಂತರೆ ಇಂತಹ ತೀಕ್ಷ್ಣ ಕಟುವಚನಗಳನ್ನು ಆಡುತ್ತೀಯೆ?"

ಸ್ವರ್ಣಮಂಜರಿಯು ಕೋಪಾವೇಶಿತಳಾಗಿ ಕೈಮುಸೆಯುತ್ತಾ, "ಅಹಹ, ಬಿನ್ನಾಣಗಿತ್ತಿ! ಬಿನ್ನಾಣಗಿತ್ತಿ! ನಿನಗೇನೂ ಗೊತ್ತಿಲ್ಲ ಅಲ್ಲವೇ? ನಾನೇ ತಿಳಿಸಬೇಕು ಅಲ್ಲವೆ? ಏಳೂವರೆ ಹೊಡೆಯುವ ಹೊತ್ತಾಯಿತು. ಕಛೇರಿಗೆ ಹೋಗುವ ಹೊತ್ತಿಗೆ ಅಡಿಗೆ ಮಾಡುವವರು ಯಾರು?" ಎಂದಳು.

ಅತುಲನು ಈವರೆಗೂ ಮೌನದಿಂದಿದ್ದು ಎಲ್ಲವನ್ನೂ ಕೇಳುತ್ತಿದ್ದ. ಅವನಿಗೆ ತನ್ನ ದೊಡ್ಡತ್ತೆಯ ಸ್ವಭಾವದ ಪರಿಚಯ ಚೆನ್ನಾಗಿ ಇತ್ತು. ಅದರಿಂದಲೇ ಅವಳೊಡನೆ ಅವನು ಹೆಚ್ಚು ಮಾತುಕತೆಯಾಡುತ್ತಿರಲಿಲ್ಲ. ಆದರೆ

ಈ ಸಮಯುದಲ್ಲಿ ಅವನಿಂದಲೂ ಸಹಿಸಲಾಗಲಿಲ್ಲ. ಅದರಿಂದ ಅವನೇ ತನ್ನ ದೊಡ್ಡತ್ತೆಗೆ ಉತ್ತರ ಕೊಟ್ಟ. "ನಿಜವಾದ ವಿಚಾರವನ್ನು ಹೇಳುವುದರಿಂದ ನಿನಗೆ ಕೋಪಬರುತ್ತೆ, ದೊಡ್ಡತ್ತೆ. ಆದರೆ ನಿನಗೂ ಗೊತ್ತು, ಈ ಊರಿನ ಇತರರಿಗೂ ಗೊತ್ತು. ಕರ್ಮ ಸವೆಯುದವರೆಗೆ ನಾವು ಕೊಟ್ಟ ಹಿಟ್ಟನಿಂದ ನಾವೇ ಹೊಟ್ಟೆ ತುಂಬಿಕೊಳ್ಳುವುದಕ್ಕೆ ಬರುವುದಿಲ್ಲ. ಇದು ಗೊತ್ತಿದ್ದೂ ಹೊರಟು ಹೋಗುವ ದಿನ ಈ ಅಭಾಗಿನಿಗಳನ್ನು ಕ್ಷಮಿಸಬಾರದೆ? ಕ್ಷಮಿಸು ವುದರಿಂದ ನಿನಗೇನು ಹಾನಿಯಾಗುವುದಿಲ್ಲವಲ್ಲ!"

ಏಕಾಏಕಿ ಅತುಲನ ಬಾಯಿಂದ ಬಂದ ಇಂತಹ ನಿಷ್ಠುರವಾದ ಮಾತು ಗಳಿಂದ ಇಬ್ಬರು ವಾರಗಿತ್ತಿಯರೂ ಬೆಕ್ಕಸ ಬೆರಗಾದರು. ನಿಮಿಷ ಎರಡು ನಿಮಿಷದವರೆಗೆ ಯಾರ ಬಾಯಿಂದಲೂ ಒಂದು ಮಾತಾದರೂ ಹೊರಡಲಿಲ್ಲ. ನಂತರ ಸ್ವರ್ಣಮಂಜರಿಯೇ ಮೊದಲು ಹೇಳಿದಳು— "ನನ್ನೊಡನೆ ಜಗಳ ವಾಡುವುದಕ್ಕಾಗಿಯೇ ಕಲ್ಕತ್ತೆಯಿಂದ ಓಡಿಬಂದಿರುವೆಯೇನು?"

ಕಿರಿಯವಳು ವ್ಯಂಗ್ಯವಾಗಿ, "ಅವನು ಜಗಳವಾಡುವದಕ್ಕೇಕೆ ಬರು ತ್ತಾನೆ ಅಕ್ಕಾ! ಅವನ ಅತ್ತೆಯನ್ನು ನಾವು 'ಗಂಗಾಯಾತ್ರೆ'ಗೆ ಹರಿಪಾಲ ಪುರಕ್ಕೆ ಕಳುಹಿಸುತ್ತೇವಂತೆ. ಅದಕ್ಕೆ ಅವರನ್ನ ಕಡೆಯ ಬಾರಿ ನೋಡಿ ಕೊಂಡು ಹೋಗುವುದಕ್ಕೆ ಬಂದಿದ್ದಾನೆ!" ಎಂದಳು.

"ಸರಿ ಹಾಗೋ ವಿಚಾರ!"

"ಸರಿ ಇಷ್ಟೇ ವಿಚಾರ ಅಕ್ಕ. ಇಷ್ಟೇ ಇನ್ನೇನೂ ಇಲ್ಲ........ನಾನೂ ಅಷ್ಟು ಹೊತ್ತಿನಿಂದ ಅದೇ ಯೋಚಿಸುತ್ತಾ ಇದ್ದೇನೆ. ಅಲ್ಲಾ ಮನೆಯವ ರಾದ ನಮಗೇ ಗೊತ್ತಿಲ್ಲದ ವಿಷಯ, ನಿಮ್ಮತ್ತಿಗೆ ಮಗ ಕಲ್ಕತ್ತೆಯಲ್ಲಿ ಕೂತು ಕೂತಿದ್ದ ಹಾಗೆಯೇ ಹೇಗೆ ತಿಳಿದುಕೊಂಡ? ಸರಿ ಹಾಗಾದರೆ—ಜನ ಆಡಿ ಕೊಳ್ಳುವುದೇನೂ ಸುಳ್ಳಲ್ಲ ಅಂತ ಕಾಣುತ್ತೆ."

ಕ್ರೋಧದಿಂದ ತಪ್ತಳಾಗಿ ತನ್ನನ್ನು ತಾನೆ ಮರೆತು ಸ್ವರ್ಣಮಂಜರಿಯು ಕಿರಚಿ, ಅರಚಿ ಗುಲ್ಲೆಬ್ಬಿಸಿ ಬಿಟ್ಟಳು. "ಹಾಗಾದರೆ ಸರಿಯೇಪ್ಪ, ಸರಿ. ನಿನ ಗಷ್ಟು ದರ್ದಿದ್ದರೆ ನಿನ್ನ ಈ ಅತ್ತೆಯನ್ನು—ಖಾಸಾ ಅತ್ತೆಯನ್ನು—'ಗಂಗಾ

ಯಾತ್ರೆ'ಗೇಕೆ ಕಳುಹಿಸುತ್ತಿ? ನಿನ್ನ ಮನೆಗೇ ಕರೆದುಕೊಂಡು ಹೋಗು. ನೋಡಿ ಊರಿನ ಜನರೆಲ್ಲ ಭೇಷ್, ಭೇಷ್ ಅನ್ನುತ್ತಾರೆ."

ಸ್ವರ್ಣಮಂಜರಿಯ ವಿಷಜ್ವಾಲೆಯಲ್ಲಿ ಅತುಲನ ಬುದ್ಧಿಶಕ್ತಿಯಿಂದ ಕೂಡ ಏಗಲಾಗಲಿಲ್ಲ. ಅವನೂ ಉದ್ರೇಕಗೊಂಡು ಹೇಳಿಬಿಟ್ಟ—"ಒಳ್ಳೆಯದೇ ದೊಡ್ಡತ್ತೆ. ನೀನೂ ನಮ್ಮವಳೇ. ಇರುವ ವಾಸ್ತವಾಂಶವನ್ನು ನೀನೆರಡು ದಿನ ಮುಂಚಿತವಾಗಿಯೇ ತಿಳಿದುಕೊಂಡೆ. ಒಳ್ಳೆಯದೇ ಆಯಿತು. ಅವರು ನನ್ನ ಮನೆಗೆ ಬಂದರೆ ನನ್ನ ತಲೆಯ ಮೇಲೆ ಕೂಡಿಸಿಕೊಳ್ಳುವುದಕ್ಕೆ ಸಿದ್ಧವಾಗಿದ್ದೇನೆ. ನಿಮ್ಮೂರಿನ ಜನರು ಭೇಷ್ ಭೇಷ್ ಎನ್ನುವರೋ ಛೀಃ, ಛೀಃ ಅನ್ನುವರೋ ಅಂದುಕೊಳ್ಳಲಿ. ನನಗದರಿಂದಾಗಬೇಕಾದುದಾದರೂ ಏನು?"

ಉದ್ರೇಕಗೊಂಡು ಮಾತನ್ನೇನೋ ಆಡಿಬಿಟ್ಟ. ಅನಂತರ ಅವನು ಮೌನಧರಿಸಿದಂತೆಯೇ ಆ ಇಬ್ಬರು ಅತ್ತೆಯರೂ ಸಹ ಅತ್ಯಂತ ಆಶ್ಚರ್ಯದಿಂದ ಮೌನತಾಳಿದರು. ಆಕಸ್ಮಾತ್ ಎಲ್ಲಿಂದಲೋ ಒಂದು ಪ್ರಚಂಡ ಸುಂಟರಗಾಳಿ ಎದ್ದು, ನಾಚಿಕೆ, ಸಂಕೋಚ, ಗುಟ್ಟು, ಮರೆ, ಎಲ್ಲವನ್ನೂ ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಎಲ್ಲಿಗೋ ಬಹುದೂರ ಹಾರಿಸಿಕೊಂಡು ಹೋಗಿಬಿಟ್ಟಿತು. ಅವರೆಲ್ಲರನ್ನೂ ಒಂದು ಆಗಾಧವಾದ, ಮೌನಮಯವಾದ, ಸದ್ದಿಲ್ಲದ ಮೈದಾನದ ಮಧ್ಯದಲ್ಲಿ ನಿಲ್ಲಿಸಿಬಿಟ್ಟಿತು. ಯಾರಿಂದ ಯಾರೂ ಯಾವುದನ್ನೂ ಬಚ್ಚಿಡುವ, ಮರೆಮಾಡುವ ಅವಕಾಶವೇ ಇಲ್ಲದಂತೆ ಮಾಡಿಬಿಟ್ಟಿತು.

ಅತುಲನು ಅಲ್ಲಿಂದ ಸುಮ್ಮನೆ ಹೊರಟುಹೋದ. ಗಾಡಿಹೊಡೆಯುವವನು ಗಾಡಿಯನ್ನು ಹೊರಗೆ ನಿಲ್ಲಿಸಿ ಒಳಗೆ ಬಂದು, "ಅಮ್ಮಾ, ಹೊತ್ತಾಯಿತಮ್ಮ, ಯಾವ ಯಾವ ಸಾಮಾನು ಇಡಬೇಕೊ ಕೊಡಿ ಮತ್ತೆ. ಈಗಲೇ ಹೊರಡದಿದ್ದರೆ ರೈಲು ಸಿಕ್ಕುವುದು ಕಷ್ಟವಾಗುತ್ತದೆ" ಎಂದ.

ಗಾಡಿಯವನು ಅಪ್ಪಣೆಪಡೆದು ತೋರಿಸಿದ ಹಾಸಿಗೆ, ಪೆಟ್ಟಿಗೆ ಇತ್ಯಾದಿ ಸಾಮಾನುಗಳನ್ನೆಲ್ಲ ತಲೆಯಮೇಲೆ ಹೇರಿಕೊಂಡು ಹೊರಟುಹೋದ. ಹಿರಿಯ ಕಿರಿಯ ನಾರಗಿತ್ತಿಯರೂ ಸರಸರನೆ ಮನೆಯೊಳಕ್ಕೆ ಹೊರಟುಹೋದರು.

ದುರ್ಗಾದೇವಿಯು ದುರ್ಗಾಮಾತೆಯ ಹೆಸರು ಸ್ಮರಿಸುತ್ತಾ ಬಾಗಿಲಿಗೆ ಬೀಗ ಹಾಕಿದಳು. ಮಗಳ ಕೈಹಿಡಿದುಕೊಂಡು ಹೋಗಿ ಸುಮ್ಮನೆ ಗಾಡಿಯಲ್ಲಿ ಹತ್ತಿ ಕುಳಿತಳು. ಮಗಳು ಪ್ರಜ್ಞಾರಹಿತಳಂತೆ ತಾಯಿಯ ತೊಡೆಯಮೇಲೆ ಕಣ್ಮುಚ್ಚಿ ಮಲಗಿದ್ದಳು.

೪

ಹನ್ನೆರಡು ವರುಷಗಳು ಗತಿಸಿದ ನಂತರ ದುರ್ಗಾದೇವಿಯು ಹರಿಪಾಲ ಪುರಿಗೆ ತವರುಮನೆಗೆ ಬಂದಳು. ಅವಳು ಊರುತಲುಪಿದುದು ಒಂದು ಶರದೃತುವಿನ ಮಸಕು ಸಂಜೆ. ಒಂದು ಬಗೆಯ ಹೊಗೆ ಹಾಗು ಮಂಜು ಊರನ್ನೆಲ್ಲಾ ಘೋರವಾಗಿ ಆಕ್ರಮಿಸಿಬಿಟ್ಟಿತ್ತು. ಆ ಮಸಕು ಸಂಜೆಯಲ್ಲಿ ಆ ಸ್ಥಿತಿಯಲ್ಲಿನ ಊರನ್ನು ಪ್ರವೇಶಿಸುತ್ತಲೇ ದುರ್ಗಾದೇವಿಯ ಹೃದಯವು ಹೊಡೆದುಕೊಳ್ಳಲಾರಂಭಿಸಿತು. ಮನೆಯಲ್ಲಿ ತಾಯಿಯಾಗಲಿ, ತಂದೆಯಾಗಲಿ ಜೀವಂತರಾಗಿರಲಿಲ್ಲ. ಇದ್ದವನು ಕೇವಲ ಒಬ್ಬ ಅಣ್ಣ ಶಂಭು ಚಟರ್ಜಿ. ಅವನಿಗೂ ಗಡುವಿನ ಜ್ವರ ಬರುತ್ತಿತ್ತು. ಆ ದಿನ ಅವನಿಗೆ ಜ್ವರಬರುವ ಗಡುವು ಸಹ ಇತ್ತು. ಆದರಿಂದಲೇ ಸೂರ್ಯಾಸ್ತವಾದೊಡನೆಯೇ ಜ್ವರ ವನ್ನು ಸ್ವಾಗತಿಸಲು ಸಿದ್ಧನಾಗಿ ಹಾಸಿಗೆಯಲ್ಲಿ ಕುಳಿತಿದ್ದ. ದುರ್ಗಾದೇವಿಯು ಬಂದ ಸಮಾಚಾರವನ್ನು ಕೇಳಿದೊಡನೆಯೇ ಒಂದು ಹಳೇ ಶಾಲುವನ್ನು ತಲೆ ಕಿವಿಗಳು ಮುಚ್ಚುವಂತೆ ಹೊದ್ದುಕೊಂಡು ಚಡಾವನ್ನು ಚಟಪಟ ಅನ್ನಿಸಿ ಕೊಂಡು ಹೊರಗೆ ಬಂದ. ದುರ್ಗಾದೇವಿಯನ್ನು ಗುರುತಿಸಿ, "ಯಾರು, ದುರ್ಗಾ ಬಂದೆಯಾ? ಬಾಮ್ಮ ಬಾ, ಒಳಗೆ ಬಾ" ಎಂದನು.

ದುರ್ಗಾದೇವಿಯು ಅಳುತ್ತ ಅಳುತ್ತ ಮುಂಬರಿದು ಅಣ್ಣನ ಅಡಿದಾವರೆ ಗಳಿಗೆರಗಿದಳು.

ಜ್ಞಾನದಾ ಪ್ರಣಾಮಮಾಡಿದಮೇಲೆ ಚಟರ್ಜಿ ಮಹಾಶಯನು, "ನಿನ್ನ ಮಗಳೂಂತ ಕಾಣುತ್ತೆ, ಎಲ್ಲಿಗೆ ಕೊಟ್ಟಿದ್ದೀಯಮ್ಮ?" ಎಂದು ಕೇಳಿದ.

ದುರ್ಗಾದೇವಿಯು ದುಃಖದಿಂದ ಹೇಳಿದಳು—"ಮದುವೆಯನ್ನು ಇದು ವರೆಗೂ ಮಾಡಲಾಗಿಲ್ಲವಣ್ಣ—ಎಲ್ಲಿಯಾದರೂ ಸರಿ ಜಾಗ್ರತೆ—"

"ಏನು? ಮದುವೆಯಾಗಿಲ್ಲ? ಇವಳು ಈಗ ಪೂರ್ಣ ಬೆಳೆದಹುಡುಗಿ—ಹುಡುಗಿಯೇನು? ಹೆಂಗಸು— ಬೆಳೆದ ಹೆಂಗಸಾಗಿದ್ದಾಳೆ ದುರ್ಗಾ!"

ಬಹಳ ವರುಷಗಳಿಂದ ಒಬ್ಬರಿಗೊಬ್ಬರ ಭೇಟಿಯಾಗಿರಲಿಲ್ಲ. ಇಷ್ಟು ವರುಷಗಳ ನಂತರ ನೋಡಿದ್ದರಿಂದ ತಂಗಿಯ ವಿಚಾರದಲ್ಲಿ ಅಣ್ಣನಲ್ಲಿ ಉದ್ಭವಿಸಿದ್ದ ಕೊಂಚ ಸಹಾನುಭೂತಿಯೂ ಕೂಡ ಕ್ಷಣಾರ್ಧದಲ್ಲಿ ದೂರವಾಯಿತು. ಅಣ್ಣನ ಕರುಣ ಕಂಠಸ್ವರವು ಕರ್ಕಶವಾಯಿತು. ಕೋಪ ಮಿಶ್ರವಾದ ಧ್ವನಿಯಲ್ಲಿ ಅಣ್ಣನು ಮೊದಲು ಮಾಡಿದ—"ಅದೇ ಚಿಂತಿಸಬೇಕಾದ ವಿಚಾರ. ಇಲ್ಲಿಯ ಜನಗಳು ಎಂತಹ ದುಷ್ಟರೂಂತ ಗೊತ್ತಾದರೆ........ಸರಿ....ನೋಡು ದುರ್ಗಾ....ಅಡಿಗೆ, ದೇವರು ಮನೆಗಳಿಗೆ ಇವಳನ್ನು ಕಳುಹಿಸಬೇಕಾದ ಕೆಲಸವೇನೂ ಇಲ್ಲ. ನಿನಗೆ ನಮ್ಮೂರಿನ ಎಲ್ಲಾ ವಿಚಾರವೂ ಗೊತ್ತೇ ಇದೆ! ನಿಜವಾಗಿಯೂ ನಮ್ಮ ಈ ಹರಿಪಾಲಪುರಿಯ ಜನಗಳಂತಹ ದುಷ್ಟ ಚಂಡಿಜನ ಪ್ರಪಂಚದಲ್ಲಿನ್ನೆಲ್ಲೂ ಇಲ್ಲ. ಒಳ್ಳೆಯದು ಬಾ, ಮನೆಯೊಳಗೆ ಬಾ. ಈ ಬೆಳೆದ ಹೆಣ್ಣನ್ನ ಅವಳ ಚಿಕ್ಕಪ್ಪನ ಹತ್ತಿರವೇ ಬಿಟ್ಟು, ಒಬ್ಬಳೇ ಬಂದಿದ್ದರೆ ಒಂದು ನಾಲ್ಕು ದಿನ ಸುಖವಾಗಿ ಇರಬಹುದಾಗಿತ್ತು. ಇಲ್ಲಿ ಇದ್ದದ್ದೇ ಆದರೆ........ ಗೊತ್ತಾಯಿತೋ ಇಲ್ಲವೋ ದುರ್ಗಾ? ಹೋಗಲಿ, ಹೋಗು. ಕೈಕಾಲು ತೊಳೆದುಕೋ! ಲೇ,....ಎಲ್ಲಿ ಹೋದೆಯೇ....ಲೇ, ಕೇಳಿಸಿತೋ ಇಲ್ಲವೋ?"

ಹೆಂಡತಿಯನ್ನು ಹುಡುಕುವ ಸಲುವಾಗಿ ಶಂಭುಚಟರ್ಜಿಯು ಮತ್ತೆ ಚಡಾವನ್ನು ಚಟಪಟ ಗುಟ್ಟಿಸುತ್ತಾ ಒಳಕ್ಕೆ ನುಗ್ಗಿದ. ದುರ್ಗಾದೇವಿ ಹಾಗು ಅವಳ ಮಗಳು ಹೇಗೆ ಜೀವ ಹಿಂಡಿಕೊಂಡು ಅವನ ಹಿಂದೆ ಹಿಂದೆಯೇ ಮನೆಯನ್ನು ಪ್ರವೇಶಿಸಿದರೋ ಅದು ಆ ಅಂತರ್ಯಾಮಿಗೊಬ್ಬನಿಗೇ ಗೊತ್ತು.

ಶಂಭುವಿನ ಮೊದಲ ಹೆಂಡತಿ ಸತ್ತುಹೋಗಿದ್ದಳು. ಎರಡನೆಯ ಮದುವೆಯನ್ನು ಮಾಡಿಕೊಂಡಿದ್ದ. ದುರ್ಗಾದೇವಿಯು ತನ್ನ ಮೊದಲನೆಯ ಅತ್ತಿಗೆಯನ್ನು ನೋಡಿದ್ದಳು. ಈಗಿನವಳನ್ನು ನೋಡಿರಲಿಲ್ಲ. ಈಗಿನವಳು ಎಷ್ಟು ಕಪ್ಪೋ ಅಷ್ಟು ರೋಗಗ್ರಸ್ತಳಾಗಿ ಸಣ್ಣಗೆ ಉದ್ದಕ್ಕೆ ಇದ್ದಾಳೆ. ಮಲೇರಿಯಾ ಜ್ವರವನ್ನು ಭೋಗಿಸಿ ಭೋಗಿಸಿ ಶರೀರದ ಬಣ್ಣವು ತೊಳೆದ ಕೆಂಡವಾಗಿತ್ತು. ಮನೆಯೊಳಗೆ ಮೂರು ದಿವಸದ ಕಸ ಹರಡಿತ್ತು. ಆಗ ತಾನೆ ಉಪಗಾರಣೆ ತೊಳೆದು ಕೈಕಾಲು ತೊಳೆದುಕೊಂಡು ಲ್ಯಾಂಪ್ ಲಾಂದ್ರ

ಗಳಿಗೆ ಎಣ್ಣೆಬತ್ತಿಯನ್ನು ಅವಳು ನೋಡುತ್ತಿದ್ದಳು. ಗಂಡನು ಕೂಗಲು ಎದುರಿಗೆ ಬಂದು ನಿಂತೊಡನೆಯೇ ಆಗಂತುಕರನ್ನು ನೋಡಿ ಬೆಪ್ಪಾಗಿ ನಿಂತು ಬಿಟ್ಟಳು. ಶಂಭುವಿಗೆ ಜ್ವರ ಏರಿಬರುತ್ತಿತ್ತು. ಆದರಿಂದ ಅತಿಥಿಗಳ ಸತ್ಕಾರಾದಿಗಳನ್ನು ಹೆಂಡತಿಗೆ ಒಪ್ಪಿಸಿ ಸಂಕ್ಷೇಪವಾಗಿ ತಂಗಿಯ ಹಾಗು ಸೋದರ ಸೊಸೆಯ ಪರಿಚಯ ಮಾಡಿಕೊಟ್ಟು ತನ್ನ ಕೊಠಡಿಯೊಳಕ್ಕೆ ಹೊರಟು ಹೋದನು.

ದುರ್ಗಾದೇವಿಯ ಅತ್ತಿಗೆಯ ಹೆಸರು ಭಾಮಿನಿ. ಮೇದಿನಪುರ ಜಿಲ್ಲೆಯ ಹೆಣ್ಣುಮಗಳು. ಅಲ್ಲಿಯ ಜನರ ವಾಡಿಕೆಯಂತೆ ಅವಳು ಮಾತುಗಳನ್ನು ಕೊಂಚ ಒತ್ತಿ ಒತ್ತಿ ಆಡುತ್ತಿದ್ದಳು. ಮೂವತ್ತೆರಡು ಹಲ್ಲುಗಳನ್ನೂ ಬಿಟ್ಟು ನಕ್ಕು ಭಾಮಿನಿಯು ನಾದಿನಿಯ ಕೈಹಿಡಿದುಕೊಂಡು ಅಡಿಗೆಯ ಮನೆಯೊಳಕ್ಕೆ ಕರೆದುಕೊಂಡು ಹೋಗಿ ಮಣೆಹಾಕಿ ಕೂಡಿಸಿದಳು. ಅತ್ತಿಗೆಯ ನಗು ಮತ್ತು ಮಾತುಕತೆಗಳ ವಿಚಿತ್ರಭಂಗಿಯನ್ನು ನೋಡಿ ದುರ್ಗಾದೇವಿಯ ಒಡಲು ಬತ್ತಿ ಹೋಯಿತು. ಬರುವಾಗ ಅವಳು ಒಂದು ಡಬ್ಬಿಯ ತುಂಬ ರಸಗುಲ್ಲ ತಂದಿದ್ದಳು. ಅದನ್ನು ತೆಗೆದಿಡುತ್ತಿದ್ದ ಹಾಗೆಯೇ ಎಲ್ಲಿಂದ ಹಾರಿಬಂದವೋ ಗೊತ್ತಿಲ್ಲ ಒಂದು ಮಕ್ಕಳ ಸೈನ್ಯ ಆ ಡಬ್ಬಿಯನ್ನು ಮುತ್ತಿಬಿಟ್ಟಿತು. ಕೆಲವು ಅಳುತ್ತಿದ್ದವು, ಕೆಲವು ಕಿರಚುತ್ತಿದ್ದವು, ಕೆಲವು ಇತರರನ್ನು ತಳ್ಳಿ ಆ ಡಬ್ಬಿಯಲ್ಲಿನ ರಸಗುಲ್ಲವನ್ನೆಲ್ಲ ತಿಂದುಬಿಡಬೇಕೆಂದು ಹವಣಿಸುತ್ತಿದ್ದವು. ಕಿತ್ತಾಟ ಕುಕ್ಕಾಟವು ಹೆಚ್ಚಿಬಿಟ್ಟವು; ರಗಳೆಯೋ ರಗಳೆ; ಕಿವಿಗಳಂತೂ ತೂತು ಬಿದ್ದುಹೋದವು. ಅವುಗಳ ತಾಯಿಯು ಒಂದಕ್ಕೆ ಅರ್ಧ, ಒಂದಕ್ಕೆ ಕಾಲು, ಇನ್ನೊಂದಕ್ಕೆ ಅದರಲ್ಲಿ ಕಾಲು, ಮತ್ತೊಂದಕ್ಕೆ ಮುಕ್ಕಾಲು ಹೀಗೆ ಒಂದೊಂದರ ಕೈಗೆ ಒಂದೊಂದು ಚೂರಿಟ್ಟು ಡಬ್ಬಿಯನ್ನು ಮಕ್ಕಳಿಂದ ಲಪಟಾಯಿಸಿಕೊಂಡು ಹೋಗಿ ಮಲಗುವ ಕೋಣೆಯಲ್ಲಿ ನೆಲುವಿನ ಮೇಲಿಟ್ಟು ಬಿಟ್ಟಳು. ಯಾರು ಯಾರಿಗೆ ಎಷ್ಟೆಷ್ಟು ಬಂದಿತ್ತೋ ಅಷ್ಟಷ್ಟನ್ನು ಅವರುಗಳು ಒಂದೇ ಬಾಯಿಗೆ ಹಾಕಿಕೊಂಡು ಕೈಗಂಟಿಕೊಂಡಿದ್ದ ರಸವನ್ನು ನೆಕ್ಕುತ್ತಾ ಹೊರಟು ಹೋದರು.

ದುರ್ಗಾದೇವಿಗೆ ಇಲ್ಲಿಯ ರೀತಿ ನೀತಿಗಳು ಕೊಂಚ ಕೊಂಚ ಗೊತ್ತಿತ್ತು. ಏಕೆಂದರೆ ಅವಳೂ ಇದೇ ಊರಿನವಳಲ್ಲವೇ ? ಆದರೆ ಎಂಟು ಹತ್ತು ವರುಷದ

ಗಂಡು ಹುಡುಗರು ಸಹ ಬರಿ ಬೆತ್ತಲೆ ಓಡಾಡುವುದನ್ನು ನೋಡಿ ಜ್ಞಾನದಾ ನಾಚಿ ತಲೆತಗ್ಗಿಸಿಬಿಟ್ಟಳು. ಹೆಚ್ಚುಕಡಿಮೆ ಹೆಣ್ಣುಮಕ್ಕಳೂ ಅಷ್ಟೆ. ಗಂಡು, ಹೆಣ್ಣುಮಕ್ಕಳ ಈ ಅವಸ್ಥಾಪ್ರಕರಣವು ಆ ಊರಿನಲ್ಲಿ ಒಂದು ಸಾಧಾರಣ ವಿಚಾರವಾಗಿಬಿಟ್ಟಿತ್ತು. ಜ್ಞಾನದಾ ಇದುವರೆಗಿದ್ದ ಊರು ಸಹ ದೊಡ್ಡ ಪಟ್ಟಣವಲ್ಲ. ಆದರೂ ಅಲ್ಲಿ ಒಳ್ಳೆ ರೀತಿ ನೀತಿಗಳಿವೆ, ಒಳ್ಳೆಯ ಅಚ್ಚು ಕಟ್ಟಾದ ಮನೆಗಳಿವೆ, ಒಳ್ಳೆಯ ರಸ್ತೆಗಳಿವೆ. ಇಲ್ಲಿಯಹಾಗೆ ಮಾವು, ಹಲಸು, ಬಿದಿರು ಇತ್ಯಾದಿ ವೃಕ್ಷಗಳ ಗುಂಪುಗಳ ಹಾಗೆ ಅಲ್ಲಿ ಕತ್ತಲುಗವಿಸಿರಲಿಲ್ಲ. ಇಲ್ಲಿಯ ಹಾಗೆ ಕೊಳೆತ ಗೊಬ್ಬರ, ಕಸಕಡ್ಡಿಗಳ ರಾಸಿಗಳಮೇಲೆ ಬೀಸಿಬರುವ ದುರ್ಗಂಧಭರಿತವಾದ ವಾಯುಸೇವನೆಯಿಂದ ಕಷ್ಟಪಡಬೇಕಾದುದೂ ಇಲ್ಲ.

ಇನ್ನೂ ಚೆನ್ನಾಗಿ ಕತ್ತಲು ಸಹ ಆಗಿರಲಿಲ್ಲ. ಆಗಲೇ ಒಂದು ನರಿಯು ಒಂದು ಪಡಸಾಲೆಯಲ್ಲಿ ನಿಂತಿತ್ತು. ಹೊಡೆಯಲು ದೊಡ್ಡಹುಡುಗರು ಹೋಗುತ್ತಲೇ ಅದು ವಿಕಾರವಾಗಿ ಕೂಗುತ್ತ ಓಡಿಹೋಯಿತು. ನಾಲ್ಕು ಕಡೆಯೂ ಒಂದು ಬಗೆಯ ಭಯೋತ್ಪಾದಕವಾದ ಖಟಖಟ ಶಬ್ದವು ಹೊರಡತೊಡಗಿತು. ಗೋಡೆಗೆ ಹೊಂದಿಕೊಂಡು ಬೆಳೆದಿದ್ದ ಒಂದು ಮರದ ಒಣಕೊಂಬೆಯ ಮೇಲೆ ಹಿಂದೆಂದೂ ಕೇಳದ ಒಂದು ವಿಕಟ ಶಬ್ದವನ್ನು ಕೇಳಿ ಜ್ಞಾನದಾ ಹೆದರಿಬಿಟ್ಟಳು. ಮೆಲ್ಲಗೆ ತಾಯಿಯ ಕಿವಿಯಲ್ಲಿ, "ಅದೇನು ಸದ್ದಮ್ಮ ಅದು" ಎಂದು ಕೇಳಿದಳು.

ಈ ಪ್ರಶ್ನೆಯು ಅವಳ ಅತ್ತೆಗೂ ಕೇಳಿಸಿತು. ಅವಳೇ ಉತ್ತರ ಕೊಟ್ಟಳು—"ಅದು ತಕ್ಷಕ * ಮಾಡುವ ಸದ್ದು ಮಗು."

ಜ್ಞಾನದಾ ಥರಥರನೆ ನಡುಗಿ ಪುನಃ ಕೇಳಿದಳು—"ತಕ್ಷಕ ಅಂದರೆ ಏನು? ತಕ್ಷಕವೆಂಬ ಸರ್ಪವಲ್ಲ ತಾನೆ?"

"ಹೌದು ಮಗು ಅದೇಯೆ. ಕೇಳಿಲ್ಲವೆ ಒಂದು ಸಲ ಯಾವಾಗಲೋ ಒಬ್ಬ ರಾಜನನ್ನು ಕಚ್ಚಿ ಏನೇನೋ ಆಯಿತು ಅನ್ನುವುದನ್ನ. ಆ ಜಾತಿಯ ಸರ್ಪಗಳು ಇಲ್ಲಿ ಸಾಧಾರಣವಾಗಿ ಎಲ್ಲ ಮರಗಳಲ್ಲಿಯೂ ತುಂಬಿವೆ."

---

* ಪುರಾಣ ಪ್ರಸಿದ್ಧವಾದ ಪಾತಾಳದ ಒಂದು ಸರ್ಪ.

ಇದನ್ನು ಕೇಳಿ ಜ್ಞಾನದಾ ಒಂದು ಸಲ ತಾಯಿಯ ಕಡೆ ನೋಡಿದಳು. ಮೊದಲೇ ಆ ಹುಡುಗಿಗೆ ಅಳು ಹತ್ತಿಬಂದಿತ್ತು. ಈಗ ಈ ವಿಚಾರವನ್ನು ಕೇಳಿ ತಾಯಿಯ ತೊಡೆಯ ಮೇಲೆ ಮುಖವಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳ ತೊಡಗಿದಳು. ಅಷ್ಟೇ ಅಲ್ಲ! "ಅಮ್ಮಾ, ಇಲ್ಲಿಂದ ಹೊರಟು ಬಿಡಮ್ಮಾ! ಹೊರಟು ಬಿಡೇ. ನಾನಿಲ್ಲಿ ಒಂದು ಕ್ಷಣವೂ ಬದುಕಿರಲಾರೆ. ಹೋಗಿ ಬಿಡೋಣ ಕಣೆ" ಎಂದು ಪುನಃ ಪುನಃ ತಾಯಿಯಲ್ಲಿ ಮೊರೆಯಿಟ್ಟಳು.

ಇದನ್ನು ಕೇಳಿ ಆ ಹುಡುಗಿಯ ಅತ್ತೆಗೆ ಬಹಳ ಆಶ್ಚರ್ಯವಾಯಿತು. "ಹೆದರುವುದಕ್ಕೆ ಕಾರಣವಾದರೂ ಏನಮ್ಮ? ಸರ್ಪಗಳೆಲ್ಲ ದೇವಸ್ವರೂಪ! ಯಾರಿಗೂ ಯಾವ ಕಷ್ಟವನ್ನೂ ಕೊಡುವುದಿಲ್ಲ. ಯಾರಿಗೂ ಯಾವ ಹಾನಿಯನ್ನೂ ಉಂಟುಮಾಡುವುದಿಲ್ಲ. ಅದೂ ಅಲ್ಲದೆ ಇಲ್ಲಿ ಹಾವು ಕಚ್ಚಿ ಸಾಯುವವರು ತಾನೆ ಎಷ್ಟು ಮಂದಿಯಿದ್ದಾರೆ? ಭಯ ಅನ್ನುವುದೇನಾದರೂ ಇದ್ದರೆ ಅದು ಈ ಸುಡುಗಾಡು ಮಲೇರಿಯಾದಿಂದ. ಒಂದು ಸಲ ಯಾರನ್ನಾದರೂ ಅಂಟಿಬಿಟ್ಟಿತೂ ಅಂದರೆ ಅವರನ್ನು ಸ್ವಾಮಿಪಾದ ಸೇರಿಸಿ ನಂತರ ಬಿಡುವುದು. ಈ ವರುಷ ಈಗ ಇಪ್ಪತ್ತು ದಿವಸದಿಂದ ನಿಮ್ಮ ಮಾವನವರ ಬೆನ್ನಟ್ಟಿಬಿಟ್ಟು, ಇಷ್ಟರಲ್ಲಿಯಾಗಲೇ ಅವರನ್ನು ಹುಲ್ಲುಕಡ್ಡಿ ಮಾಡಿಬಿಟ್ಟಿದೆ. ಇನ್ನೂ ಈ ಖಾಯಿಲೆಯ ಸ್ಥಿತಿಯು ಹೀಗೆಯೇ ಇದ್ದರೆ ಈ ಊರಿನಲ್ಲಿ ಯಾರ ಬಾಯಿಗೆ ನೀರು ಬಿಡುವುದಕ್ಕೆ ಯಾರು ಉಳಿದಿರುತ್ತಾರೆಯೋ ಹೇಳುವುದಕ್ಕೆ ಬರುವುದಿಲ್ಲ" ಎಂದಳು.

ಅತುಲನು ಹೊರಡುವ ಸಮಯದಲ್ಲಿ ಆಡಿದ ಮಾತನ್ನೇ ಯೋಚಿಸುತ್ತಾ ಜ್ಞಾನದಾ ಸುಮ್ಮನೆ ಮಲಗಿದ್ದಳು. ಅಂದು ರಾತ್ರಿ ಅವಳು ಒಂದು ನಿದ್ದೆಯಾದರೂ ಸರಿಯಾಗಿ ಮಾಡಿಲ್ಲವೇನು—ಮಾಡಲಾಗಲಿಲ್ಲ. ತಾಯಿಯ ಎದೆಯ ಮೇಲೆ ಮುಖವಿಟ್ಟು ಅವಳು ಮೇಲಿಂದ ಮೇಲೆ ಬೆಚ್ಚಿತೊಡಗಿದಳು. ಹೀಗೆಯೇ ರಾತ್ರಿಯೆಲ್ಲಾ ತಳ್ಳಿತು. ಬೆಳಗೂ ಆಯಿತು. ಹೊಸ ಸ್ಥಳ ಹಾಗ್ಯೆ ಹೊಸ ಪ್ರಕಾಶ ಕಣ್ಮುಂದೆ ಬಂದು ನಿಂತರೂ ಜ್ಞಾನದೆಗೆ ಕೊಂಚವಾದರೂ ಆನಂದವಾಗಲಿಲ್ಲ; ಅವಳ ಮನಸ್ಸಿಗೆ ಕೊಂಚವಾದರೂ ತೃಪ್ತಿಯಾಗಲಿಲ್ಲ. ಬದಲಾಗಿ ಜಲ, ವಾಯು, ಪ್ರಕಾಶ, ನೋಟ ಎಲ್ಲವೂ ಹಿಂದಿನ ಸಂಜೆಗಿಂತ ಭಯಂಕರವಾಗಿ ಭಾಸವಾಗಿ ಅವಳ ಹೃದಯವನ್ನು ಹಿಂಡಿದಂತಾಯಿತು.

ಇಷ್ಟು ದೊಡ್ಡ ಹೆಣ್ಣನ್ನು ನೋಡಿ ಊರಿನ ಅಕ್ಕಪಕ್ಕದವರು ಅತ್ಯಂತ ಆಶ್ಚರ್ಯಪಟ್ಟರು. ಬಂಗಾಳದಲ್ಲಿ ಹುಡುಗಿಯರ ವಯಸ್ಸನ್ನು ಸರಿಯಾಗಿ ಹೇಳುವ ಅಭ್ಯಾಸವಿಲ್ಲ. ತಾಯಿ ತಂದೆಗಳು ಒಂದೆರಡು ವರುಷಗಳಾದರೂ ಸಾಧಾರಣವಾಗಿ ಕಡಿಮೆ ಹೇಳಬೇಕಾಗುತ್ತದೆ. ಹೇಳುತ್ತಾರೆ ಎಂಬುದೂ ಎಲ್ಲರಿಗೂ ಗೊತ್ತಿದ್ದ ವಿಚಾರ. ಅದರಿಂದ ದುರ್ಗಾದೇವಿಯು ಮಗಳಿಗೆ ಹದಿಮೂರು ವರುಷವೆಂದು ಹೇಳಿದರೂ ಜನಗಳು ಹದಿನೈದು ವರುಷವೆಂದು ತೀರ್ಮಾನಿಸಿಕೊಂಡರು. ಹಾಗೆ ತೀರ್ಮಾನಿಸಲು ಇನ್ನೂ ಒಂದು ಕಾರಣ ವಿತ್ತು. ಹುಡುಗಿಯ ತಾಯಿತಂದೆಗಳು—ಅದರಲ್ಲೂ ತಾಯಿಯು—ತಾನು ಸ್ವತಃ ತಿನ್ನದೆ, ಉಡದೆ ಮಗಳಿಗೆ ಚೆನ್ನಾಗಿ ಆರೈಕೆ ಪೋಷಣೆಮಾಡಿ, ಒಳ್ಳೆ ಬಟ್ಟೆ ಬರೆಹಾಕಿ ಬೆಳೆಸಿದ್ದರು. ಆದರಿಂದ ಹುಡುಗಿಯು ಚೆನ್ನಾಗಿ ಆರೋಗ್ಯ ವಾಗಿ ಬೆಳೆದಿದ್ದಳು; ಶರೀರವು ಹೃಷ್ಟಪುಷ್ಟವಾಗಿತ್ತು. ಅವಳ ಆ ಅಖಂಡ ಸ್ವಾಸ್ಥ್ಯವೇ ಈಗ ಒಂದು ಕಷ್ಟವಾಗಿ ಪರಿಣಮಿಸಿತು. ಈ ಬೆಳೆವಣಿಗೆ, ಮೈಕಟ್ಟುಗಳು ಅವಳ ನಿಜವಾದ ವಯಸ್ಸನ್ನು ಮುಚ್ಚಿಟ್ಟು ಹೆಚ್ಚು ವಯಸ್ಸನ್ನು ಎತ್ತಿ ಸಾರುತ್ತಿತ್ತು.

ಇವರುಗಳು ಬಂದು ಎರಡು ದಿನಗಳು ಕೂಡ ಕಳೆದಿರಲಿಲ್ಲ. ಶಂಭುವು ಸಮಯ ಹೊಂದಿಸಿಕೊಂಡು ಬಂದು ತಂಗಿಯೊಡನೆ, "ಈ ಹುಡುಗಿಯಿಂದ ನಾವು ಈ ಊರಿನಲ್ಲಿ ಮುಖತೋರಿಸುವ ಹಾಗಿಲ್ಲ. ಒಬ್ಬ ಸುಪಾತ್ರನು ಈಗ ಸಮಯಕ್ಕೆ ಕೈಗೆ ಸಿಕ್ಕಿದ್ದಾನೆ. ಅವನೊಡನೆ ಹುಡುಗಿಯ ವಿವಾಹ ಮಾಡುತ್ತೀಯಾ?" ಎಂದನು,

"ನಮ್ಮ ಹುಡುಗಿಗೆ ವರನೇನೋ ಗೊತ್ತಾಗಿ ಬಿಟ್ಟಿದ್ದಾನೆ. ಅದರಿಂದ ಬೇರೆಲ್ಲೂ ಮದುವೆ ಮಾಡುವ ಹಾಗಿಲ್ಲ."

"ಸರಿ ಹಾಗಾದರೆ, ಬೇರೆ ಮಾತೇ ಇಲ್ಲ. ಆದರೂ ಇಂತಹ ಸುಪಾತ್ರನಾದ ವರ ಸಿಕ್ಕಬೇಕಾದರೆ ಪುಣ್ಯಮಾಡಿರಬೇಕಮ್ಮ, ಪುಣ್ಯಮಾಡಿರಬೇಕು. ಇಪ್ಪತ್ತು ಇಪ್ಪತ್ತೈದು ಎಕರೆ ಫಲವತ್ತಾದ ಉತ್ತಮ ಜಮೀನು, ಹೊಲ, ಗದ್ದೆ, ತೋಟ, ಧನಧಾನ್ಯ, ಅಲ್ಲದೆ ಒಳ್ಳೆ ಭಾರಿಮನೆ ಎಲ್ಲಾ ಇದೆ. ಅಷ್ಟೇ ಅಲ್ಲ ಓದುಬರಹ ಕೂಡ........"

ಮಾತು ಮುಗಿಸುವ ಮುನ್ನವೇ ದುರ್ಗಾದೇವಿಯು, "ಅದೆಲ್ಲ ಆಗುವುದಿಲ್ಲ, ಅಣ್ಣಾ. ಬೇರೆ ಎಲ್ಲೂ ಸಾಧ್ಯವಿಲ್ಲ. ಈ ವರುಷ ಮುಗಿಯುವುದೇ ಕಾದಿದ್ದೇನೆ. ಮುಂದಿನ ವರುಷ ಬರುತ್ತಿದ್ದಹಾಗೆಯೇ ಲಗ್ನಮಾಡಿ ಬಿಡುತ್ತೇನೆ" ಎಂದಳು.

ಆದರೂ ಕೂಡ ಶಂಭುಬಾಬುವು, "ನನಗನ್ನಿಸುವುದರಲ್ಲಿ ಬರುವ ಮಾರ್ಗಶಿರ ಮಾಸದಲ್ಲಿಯೇ ಲಗ್ನಮಾಡಬೇಕಾದುದು ಅನಿವಾರ್ಯ" ಎಂದ.

ಮತ್ತೆ ಪ್ರತಿವಾದಿಸುವುದು ನಿರರ್ಥಕವೆಂದು, "ನನಗೆ ಕೆಲಸವಿದೆ" ಎಂದು ದುರ್ಗಾದೇವಿಯು ಅಲ್ಲಿಂದ ಹೊರಟು ಹೋದಳು. ಆ ಸುಪಾತ್ರನು ಬೇರೆ ಯಾರೂ ಅಲ್ಲ, ಶಂಭುವಿನ ಈಗಿನ ಹೆಂಡತಿಯ ಹಿರಿಯಣ್ಣನೆಂಬುದು ಆ ಮೇಲೆ ಕೊಂಚ ಕೊಂಚವಾಗಿ ಗೊತ್ತಾಯಿತು. ಹೆಂಡತಿಯು ಸತ್ತದ್ದರಿಂದ ಈಗಾರು ತಿಂಗಳುಗಳಿಂದ ಅವನು ಆರೋಗ್ಯವಿಲ್ಲದಿದ್ದರೂ ಉದ್ಯೋಗವಿಲ್ಲದೆ ಅಲ್ಲಿ ಇಲ್ಲಿ ಅಲೆಯುತ್ತಿದ್ದಾನೆ. ಈಗಿರುವ ಸ್ಥಿತಿಯಲ್ಲಿ ಅವನು ಹೆಚ್ಚುದಿನ ಬದುಕಿರುವನೆಂಬ ಆಸೆಯನ್ನು ಸಹ ಇಟ್ಟುಕೊಳ್ಳುವ ಹಾಗಿಲ್ಲ. ಅವನಿಗೆ ಮನೆಯಲ್ಲಿ ಮಕ್ಕಳುಮರಿಗಳು ಇರುವುದರಿಂದ ಅವುಗಳನ್ನು ನೋಡಿಕೊಳ್ಳಲು ವಾಸ್ತವವಾಗಿಯೂ ಒಂದು ಬೆಳೆದ ಹೆಣ್ಣಿನ ಅವಶ್ಯಕತೆ ಏನೋ ಇದೆ.

ಇದೇ ಕಾರಣದಿಂದಲೇ ಏನೋ ಪದೇಪದೇ ದುರ್ಗಾದೇವಿಯು ಈ ಸಂಬಂಧವನ್ನು ನಿರಾಕರಿಸುತ್ತಿದ್ದರೂ ಸಹ ಆ ಸುಪಾತ್ರನು ಇದ್ದಕ್ಕಿದ್ದಹಾಗೆಯೇ ಒಂದು ದಿನ ಬಂದು ತನ್ನ ತಂಗಿಯ ಮನೆಯಲ್ಲಿ ತಂಗಿಯೇ ಬಿಟ್ಟ. ಬರುತ್ತಿದ್ದ ಹಾಗೆಯೇ ಎದುರಿಗೆ ಅವನಿಗೆ ಜ್ಞಾನದೆಯೂ ಗೋಚರಿಸಿಯೇ ಬಿಟ್ಟಳು. ಸರಿ ಇನ್ನೇನು! ಆ ಪುಣ್ಯಶಾಲಿಯು ಹುಡುಗಿಯನ್ನು ಒಪ್ಪಿದನೆಂದು ಹೇಳಬೇಕಾದ ಅವಶ್ಯಕತೆಯೇ ಇಲ್ಲ. ಇದಿಷ್ಟಾದಮೇಲೆಯೇ ಶಂಭುವಿನ ಸ್ನೇಹದಿಂದೊಡಗೂಡಿದ ಅನುರೋಧವೆಲ್ಲ ದುರ್ಗಾದೇವಿಯ ಪಾಲಿಗೆ ಕಠೋರ ಅತ್ಯಾಚಾರದ ರೂಪದಲ್ಲಿ ಪ್ರಕಟವಾಗತೊಡಗಿತು. ಪ್ರಿಯನಾಥನಿಲ್ಲದಿರುವ ಈ ಸಮಯದಲ್ಲಿ ತಂಗಿಯ ಹಾಗು ಅವಳ ಮಗಳಿಗೆ ಇವನೇ ಅಭಿಭಾವಕನಾಗಿದ್ದಾನೆ. ಅವಶ್ಯಕವೆನಿಸಿದರೆ ಇದೇ ಮಾರ್ಗಶಿರದಲ್ಲಿ ತಾನು

ಮೆಚ್ಚಿದವನೊಡನೆ ಬಲವಂತದಿಂದಲಾದರೂ ಸರಿಯೆ ತನ್ನ ಸೋದರಸೊಸೆಯ ಲಗ್ನ ಮಾಡಿಬಿಡುವೆನೆಂಬ ಸೂಚನೆಯನ್ನು ಸಹ ಶಂಭುಬಾಬುವು ಸ್ಪಷ್ಟವಾಗಿ ಕೊಟ್ಟುಬಿಟ್ಟ.

ಅಣ್ಣನೊಡನೆ ವಾದ ವಿವಾದಮಾಡಿ ಒಳಗೆ ಹೋಗಿ ಹುಡುಗಿಯ ಕಡೆ ನೋಡಿದೊಡನೆಯೇ ಅವಳೂ ಎಲ್ಲವನ್ನೂ ಕೇಳಿಬಿಟ್ಟಿದ್ದಾಳೆಂದು ದುರ್ಗಾ ದೇವಿಗೆ ಸ್ಪಷ್ಟವಾಗಿ ಗೊತ್ತಾಯಿತು. ಅತ್ತು ಅತ್ತು ಹುಡುಗಿಯ ಕಣ್ಣುಗಳು ಊದಿ ಕೆಂಪೇರಿದ್ದವು. ತಾಯಿಯು ಅವಳನ್ನು ಬಾಚಿ ಅಪ್ಪಿಕೊಂಡು, "ನಾನು ಬದುಕಿದ್ದೂ ನಿನಗೇನು ಭಯ ಮಗು !" ಎಂದಳು.

ಅವಳೇನೋ ಬಾಯಿಂದ ನಿಜವಾಗಿಯೂ ಅಭಯದಾನ ಮಾಡಿದಳು. ಆದರೆ ಭಯದಿಂದ ಅವಳ ಹೃದಯಕಲಶವೇ ಬತ್ತಿಹೋಗಿತ್ತು. ಈ ಭಾಗ ಗಳಲ್ಲಿ ಹೀಗೆ ಬಲವಂತದಿಂದ ಹಿಡಿದು ಮದುವೆಮಾಡುವುದು ಪ್ರತಿ ನಿತ್ಯದ ಒಂದು ಸರ್ವೇಸಾಧಾರಣ ಘಟನೆಯಾಗಿ ಹೋಗಿರುವುದು ದುರ್ಗಾದೇವಿಗೂ ಗೊತ್ತಿಲ್ಲದಿರಲಿಲ್ಲ.

ತಾಯಿಯ ಎದೆಯಲ್ಲಿ ಮುಖ ಮುಚ್ಚಿಕೊಂಡು ಆ ಹುಡುಗಿಯು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅವಳ ಹಣೆಯ ಮೇಲೆ ತಾಯಿಯು ಕೈಯಿಟ್ಟು ನೋಡಿದಳು. ಜ್ವರದ ತಾಪದಿಂದ ಅವಳ ಶರೀರವೆಲ್ಲಾ ಕೆಂಡದಂತಾಗಿತ್ತು. ಮಗಳ ಕಣ್ಣೀರನ್ನು ತಾಯಿಯು ತನ್ನ ಸೆರಗಿನಿಂದ ಒರೆಸಿ, "ಜ್ವರ, ಯಾವಾಗಿ ನಿಂದ ಮಗು ?" ಎಂದು ಕೇಳಿದಳು.

"ನಿನ್ನೆ ರಾತ್ರಿಯಿಂದ."

"ನನಗೇಕೆ ಹೇಳಲಿಲ್ಲವಮ್ಮ. ಇಲ್ಲಿ ಈಗ ಭಯಂಕರ ಮಲೇರಿಯಾ ಜಾಡ್ಯ ಹಬ್ಬಿಬಿಟ್ಟಿದೆ."

ಹುಡುಗಿಯು ಸುಮ್ಮನಿದ್ದಳು. ಏನೊಂದು ಉತ್ತರವನ್ನೂ ಕೊಡಲಿಲ್ಲ.

ಇದುವರೆಗೆ ದುರ್ಗಾದೇವಿಯು ತನ್ನ ಅತ್ತಿಗೆಯ ಹತ್ತಿರ ಯಾವ ಬಗೆಯ ನಿಕಟ ಸಂಬಂಧವನ್ನೂ ಬೆಳೆಸುವ ಪ್ರಯತ್ನ ಮಾಡಿರಲಿಲ್ಲ. ಅವಳ ವಿಕಾರ ಸ್ವರೂಪ, ಅದಕ್ಕಿಂತ ಹೆಚ್ಚಾಗಿ ಆ ಭಯಂಕರವಾದ ನಗುವನ್ನು ನೋಡಿ,

ಕೇಳಿಯೇ ದುರ್ಗಾದೇವಿಯ ಹೃದಯವು ಹೊಡೆದುಕೊಳ್ಳುತ್ತಿತ್ತು. ಇಷ್ಟೇ ಅಲ್ಲ. ಇದಕ್ಕಿಂತ ಹೆಚ್ಚಾಗಿ ಅತ್ತಿಗೆಯು ಅತ್ಯಂತ ಕರ್ಕಶವಾಣಿಯನ್ನು ಅವಳು ಸಹಿಸಲಾರದವಳಾಗಿದ್ದಳು. ಹಳ್ಳಿಯ ಹೆಂಗಸರೇ ಹಾಗೆ! ಸ್ವಭಾವ ವಾಗಿ ಏರು ಧ್ವನಿಯಲ್ಲಿ ಮಾತನಾಡುವ ಅಭ್ಯಾಸ. ಆದರೂ ಈಕೆಯ ತೀರ ಸಾಧಾರಣ ಮಾತುಕತೆಯನ್ನು ದೂರದಿಂದ ಕೇಳಿದರೂ ಸಹ ಯಾರೊಡ ನೆಯೋ ಜಗಳವಾಡುತ್ತಿರುವಂತೆ ಭಾಸವಾಗುತ್ತಿತ್ತು. ಅಲ್ಲದೆ ಈಕೆ ಮಾತ ನಾಡುವುದರಲ್ಲಿ ಎಷ್ಟು ತೀಕ್ಷ್ಣವೋ ಜಗಳವಾಡುವುದರಲ್ಲಿ ಅಷ್ಟಕ್ಕಷ್ಟು ಪ್ರವೀಣೆ! ಆದರೆ ಆಕೆಯ ಒಂದು ಗುಣವನ್ನು ಮಾತ್ರ ದುರ್ಗಾದೇವಿಯು ಅರಿತುಕೊಂಡು ಬಿಟ್ಟಿದ್ದಳು—ತಾನೇ ಮೇಲೆ ಬಿದ್ದು ಗುದ್ದಾಟಕ್ಕೆ ಹೋಗುವ ಸ್ವಭಾವ ಅವಳದಲ್ಲ. ಅವಳ ದಾರಿಗೆ ಅವಳನ್ನು ಬಿಟ್ಟು, ಅವಳನ್ನು ಯಾರೂ ಏನೂ ಅನ್ನದಿದ್ದರೆ ಅವಳು ಯಾವ ಮಾತಿಗೂ ಬರುತ್ತಲೇ ಇರಲಿಲ್ಲ. ಇನ್ನೊಬ್ಬರ ಮಾತಿಗೆ ತಾನಾಗಿಯೆ ತಲೆಹಾಕುತ್ತಲೂ ಇರಲಿಲ್ಲ. ತನ್ನ ಮಕ್ಕಳು ಮರಿಗಳ ಊಟ ಉಡಿಗೆ, ನೀರುನಿಡಿ, ಬಟ್ಟೆಬರೆ, ಮನೆಗೆಲಸ ಇದರಲ್ಲಿ ಮಗ್ನ ಳಾಗಿದ್ದು ಬಿಡುವಳು.

ಬಂದ ದಿವಸವೇ ದುರ್ಗಾದೇವಿಯು ಅಡಿಗೆಗೆ ಸಹಾಯಮಾಡಬೇಕೆಂದು ಇಷ್ಟಪಟ್ಟಳು. ಆದರೆ ಭಾಮಿನಿಯು, "ನೀನು ಒಂದು ನಾಲ್ಕುದಿವಸ ಇದ್ದು ಹೋಗಬೇಕೂಂತ ಬಂದಿದೀಯ. ನೀನು ಕೆಲಸಮಾಡಬೇಕೆ? ಯಾವ ಕೆಲಸಮಾಡುವುದಕ್ಕೂ ನಿನ್ನನ್ನು ಬಿಡುವುದಿಲ್ಲ. ನಾನಿರುವವರೆಗೂ ನನ್ನ ಅಡಿಗೆಮನೆ, ಉಗ್ರಾಣ ಇವುಗಳ ಭಾರವನ್ನು ಯಾರಿಗೂ ವಹಿಸುವುದಿಲ್ಲ.'' ಎಂದು ಸ್ಪಷ್ಟವಾಗಿ ಹೇಳಿಬಿಟ್ಟಿದ್ದಳು.

ಆಗಿನಿಂದ ದುರ್ಗಾದೇವಿಯು ಈ ಒಂದು ವಿಚಾರದಲ್ಲಿ ಒಂದು ಬಗೆಯ ನಿಶ್ಚಿಂತೆಯಿಂದ ಇದ್ದುಬಿಟ್ಟಳು.

ಇಂದು ಹೊತ್ತಾದದ್ದನ್ನು ನೋಡಿ ಭಾಮಿನಿಯು ಬಾಗಿಲ ಬಳಿ ಬಂದು ತನ್ನ ಸ್ವಾಭಾವಿಕ ಗಡಸು ಧ್ವನಿಯಲ್ಲಿ, "ಇವತ್ತೇನು ಊಟಗೀಟ ಬೇಡ ವೇನ್ರೆ ನಿಮಗೆ? ಅಡಿಗೆಮಾಡಿ ಸುಮ್ಮನೆ ಕುಕ್ಕರು ಬಡಿದಿರಲೇನು ?" ಎಂದು ಕೇಳಿದಳು.

ದುರ್ಗಾದೇವಿಯು ತಲೆಯೆತ್ತಿ, “ಮಗುವಿಗೆ ವಿಪರೀತ ಜ್ವರ ಬಂದಿದೆ, ಅತ್ತಿಗೆ. ನೀವೆಲ್ಲಾ ಊಟಮಾಡಿ. ನಾವು ತಾಯಿ, ಮಗಳು ಇವತ್ತು ಊಟ ಮಾಡುವುದಿಲ್ಲ” ಎಂದಳು.

“ಮಗಳಿಗೆ ಜ್ವರವಾದರೆ ನಿನಗೇನು ? ನೀನೇಕೆ ಊಟಮಾಡುವುದಿಲ್ಲ ? ಅಲ್ಲದೆ ಜ್ವರ ಯಾರಿಗೆ ತಾನೆ ಬರುವುದಿಲ್ಲ ? ಏಳು, ಎದ್ದು ಬಾ.”

“ಬೇಡ ಅತ್ತಿಗೆ, ಊಟಕ್ಕೆ ನನ್ನನ್ನು ಬಲವಂತಮಾಡಬೇಡ. ಮಗಳನ್ನು ಬಿಟ್ಟು ನನ್ನ ಗಂಟಲಲ್ಲಿ ಒಂದು ತುತ್ತೂ ಇಳಿಯುವುದಿಲ್ಲ” ಎಂದು ದುರ್ಗಾದೇವಿಯು ಕಾತರ ಕಂಠದಿಂದ ಹೇಳಿದಳು.

“ನಿನ್ನ ಮಾತುಗಳೆಲ್ಲ ವಿಚಿತ್ರ ಕಣೆ!” ಎಂದು ಭಾಮಿನಿಯು ಹೊರಟು ಹೋದಳು. ಅಡಿಗೆಯ ಮನೆಯ ಬಾಗಿಲಲ್ಲಿ ನಿಂತು ಪುನಃ, “ಜ್ವರ ಬಂದಿದ್ದರೆ ವೈದ್ಯನನ್ನು ಕರೆಸಿ ಔಷಧಿ ಕೊಡಿಸಿದರಾಯಿತು. ಈ ಊರಿನಲ್ಲಿ ಮಲೇರಿಯಾ ಜ್ವರ ಬಂದರೆ ಊಟ ಯಾರು ಬಿಡುತ್ತಾರೆ? ಎಲ್ಲರೂ ಊಟಮಾಡುತ್ತಾರೆ. ಇತ್ತಕಡೆ ಉಪವಾಸ ಗಿಪವಾಸಮಾಡುವುದು ಯಾರಿಗೂ ಗೊತ್ತೇ ಇಲ್ಲ” ಎಂದು ಭಾಮಿನಿ ಹೇಳಿದಳು.

ಅಷ್ಟೆ, ಅವಳು ತನ್ನ ಕೆಲಸಕ್ಕೆ ಹೊರಟ ಹೋದಳು.

ಮಧ್ಯಾಹ್ನದ ಮೇಲೆ ಭಾಮಿನಿಯು ಸ್ವಂತವಾಗಿ ಒಂದು ಲೋಟದ ತುಂಬ ಕಷಾಯ ಮಾಡಿಕೊಂಡು ಬಂದು, “ಏಳು ಮಗು, ಈ ಕಷಾಯ ಕುಡಿದು ಬಿಡು. ಆ ಮೇಲೆ ಕೊಂಚ ತಿಳಿಸಾರು ಅನ್ನ ತಿಂದುಬಿಡುವೆಯಂತೆ” ಎಂದು ಜ್ಞಾನದೆಗೆ ಹೇಳಿದಳು.

ಅತ್ತಿಗೆ ಜ್ಞಾನದಾ ಬಹಳ ಹೆದರುತ್ತಿದ್ದಳು. ಬದಲಾಡದೆ ಎದ್ದು ಆ ಕಹಿಯಾದ ಕಷಾಯವನ್ನು ಕೊಂಚ ಕುಡಿದು ಹಾಗೆಯೆ ವಾಕರಿಸಿಕೊಂಡು ಪುನಃ ಮೊದಲಿನಂತೆ ಮುದುರಿಕೊಂಡಳು. ಆ ಸಮಯದಲ್ಲಿ ಅಲ್ಲಿ ದುರ್ಗಾದೇವಿ ಇರಲಿಲ್ಲ. ಆ ವಾಕರಿಕೆಯ ಶಬ್ದ ಕೇಳಿಸುತ್ತಲೇ ಗಾಬರಿಯಿಂದ ಓಡಿ ಬಂದು ಆ ದೃಶ್ಯವನ್ನು ನೋಡಿ ಅವಳು ಅವಾಕ್ಕಾಗಿ ನಿಂತುಬಿಟ್ಟಳು. ಭಾಮಿನಿಯು ಕುಪಿತಳಾಗಿ ಪಡಸಾಲೆಗೆ ಬಂದು ನೆರೆಹೊರೆಯವ

ರಿಗೆ ಕೇಳಿಸುವಂತೆ, "ಇಂತಹ ದೊಡ್ಡಸ್ತಿಕೆ ಹೆಣ್ಣು ಕಟ್ಟಿಕೊಂಡು ನಮ್ಮಂತಹ ಬಡವರಮನೆಗೆ ಬರಬೇಕಾದುದೇನಿತ್ತು" ಎಂದು ಒದರಿದಳು.

ಅಂತೂ ಜ್ವರವೇನೋ ಜ್ಞಾನದೆಗೆ ಕ್ಷಣ ಕ್ಷಣಕ್ಕೂ ಏರುತ್ತಾ ಹೋಯಿತು. 'ಈ ಹಳ್ಳಿಯ ಕಡೆ ಹಾವುಗೀವು ಕಚ್ಚಿ ಎಷ್ಟು ಜನ ಸಾಯುತ್ತಾರೆ? ಯಾರು ಸತ್ತರೂ ಈ ಸುಡುಗಾಡು ಮಲೇರಿಯಾದಿಂದ, ಒಂದು ಸಲ ಹಿಡಿದುಬಿಟ್ಟರೆ ಜೀವಸಹಿತ ಬಿಡುವುದಿಲ್ಲ' ಎಂದು ಭಾಮಿನಿಯು ಅಂದು ಹೇಳಿದ ಮಾತುಗಳು ಇಂದು ಪ್ರತ್ಯಕ್ಷ ಪ್ರಮಾಣವಾಗಿ ಕಾಣುವುದಕ್ಕೆ ಹೆಚ್ಚು ಹೊತ್ತು ಹಿಡಿಯಲಿಲ್ಲ. ಕೊಂಚ ಹೊತ್ತಿನಲ್ಲಿಯೇ ಜ್ಞಾನದಾ ಹಾಸಿಗೆಯನ್ನು ಪಟ್ಟಾಗಿಯೇ ಹಿಡಿದುಬಿಟ್ಟಳು.

ಕಾರ್ತೀಕ ಸಂಕ್ರಾಂತಿ ಅಂದು. ಕೊಠಡಿಯಲ್ಲಿ ಪ್ರವೇಶಿಸುತ್ತಲೇ ಕಂಡ ದೃಶ್ಯವು ದುರ್ಗಾದೇವಿಗೆ ಅಚ್ಚರಿಯನ್ನುಂಟುಮಾಡಿತು. ಭಾಮಿನಿಯು ಜ್ಞಾನುವಿನ ತಲೆಯಮೇಲೆ ಕೈಯಾಡಿಸುತ್ತಾ ತಲೆಯ ಬಳಿಯೇ ಕುಳಿತಿದ್ದಳು. ನಿಜವಾಗಿಯೂ ಆಶ್ಚರ್ಯಪಡಲೇ ಬೇಕು! ಒಂದು ಕಡೆ ಅತ್ಯಾವಶ್ಯಕವೆನಿಸಿದ ಮನೆಗೆಲಸಗಳನ್ನೆಲ್ಲ ಬಿಟ್ಟು ಬಿಟ್ಟು ಈ ಸಣ್ಣ ಕೆಲಸವನ್ನು ಮಾಡುವುದಕ್ಕೆ ಪುರಸತ್ತು ತಾನೆ ಎಲ್ಲಿಂದ? ಇನ್ನೊಂದು ಕಡೆ ಪರರ ಹುಡುಗಿಗೆ ಹೀಗೆ ಅಯಾಚಿತವಾಗಿ ಸೇವೆಗೈಯುವುದು ಭಾಮಿನಿಯ ಪ್ರಕೃತಿಗೆ ವಿರುದ್ಧ ಹಾಗು ವಿಚಿತ್ರವಾದುದೆಂದು ದುರ್ಗಾದೇವಿಗೆ ಕಂಡುಬಂದಿತ್ತು. ಕೂಡಲೇ ತನ್ನ ಅಣ್ಣನು ಆಡಿದ ವಿವಾಹ ಪ್ರಸ್ತಾವನೆಯು ಸ್ಮರಣೆಗೆ ಬಂದು, ದುರ್ಗಾದೇವಿಯು ಒಂದು ಬಗೆಯ ಶಂಕೆಯಿಂದ ರೋಮಾಂಚಿತಳಾದಳು. ಆ ಉದ್ದೇಶ ಸಾಧನಾ ಪ್ರಯತ್ನವೇ ತನ್ನ ಅತ್ತಿಗೆಯ ಈ ಲೀಲೆ ಎನ್ನುವುದರಲ್ಲಿ ಅವಳಿಗೆ ಲವಲೇಶವಾದರೂ ಸಂಶಯ ಉಳಿಯಲಿಲ್ಲ. ಏಕೆಂದರೆ ಭಾಮಿನಿಯೇ ತನ್ನ ಅಣ್ಣನಿಗೆ ಜ್ಞಾನದೆಯನ್ನು ಮದುವೆಮಾಡಿಸುವ ಸಲುವಾಗಿ ತನ್ನ ಗಂಡನನ್ನು ನಿಯೋಗಿಸಿದ್ದಾಳೆ, ಒಳಗೊಳಗೇ ಅವನನ್ನು ಪ್ರೇರೇಪಿಸಿದ್ದಾಳೆಂದು ಈ ಮೊದಲೇ ದುರ್ಗಾದೇವಿಯು ಮನದೊಳಗೇ ನಿಶ್ಚಯಮಾಡಿಕೊಂಡು ಬಿಟ್ಟಿದ್ದಳು.

ಭಾಮಿನಿಯು ಸ್ವರವನ್ನು ಬಹಳ ತಗ್ಗಿಸಿಕೊಂಡು ಸಾಧ್ಯವಾದಷ್ಟು ಕೋಮಲಮಾಡಿಕೊಂಡು, "ತಾರಕೇಶ್ವರದಲ್ಲಿರುವ ದೊಡ್ಡ ಡಾಕ್ಟರನ್ನು

ಕರೆದುತರಲು ನಿನ್ನ ಅಣ್ಣನವರನ್ನು ಇವತ್ತು ಕಳುಹಿಸಿದ್ದೇನಮ್ಮಾ, ದುರ್ಗಾ. ಇದೇನಿದು ಸುಡುಗಾಡು. ದಿನ ದಿನಕ್ಕೂ ಜ್ವರ ಏರುತ್ತಲೇ ಇದೆ—ಇದು ಒಳ್ಳೆಯದಲ್ಲ!" ಎಂದಳು.

ದುರ್ಗಾದೇವಿಯು ಅಸ್ಪಷ್ಟ ಸ್ವರದಲ್ಲಿ ಏನು ಹೇಳಿದಳೋ ಕೇಳಿಸಲೇ ಇಲ್ಲ. ಏಕೆಂದರೆ ಡಾಕ್ಟರನ್ನು ಕರೆಸುವ ಸಮಾಚಾರವನ್ನು ಕೇಳಿ ಸಹ ಅವಳ ಹೃದಯವು ಪ್ರಸನ್ನವಾಗಲಿಲ್ಲ.

ಭಾಮಿನಿಯು ನಂತರ ತನ್ನ ಕೆಲಸಗಳಿಗೆ ಹೊರಟು ಹೋದಳು. ಜ್ಞಾನದಾ ದಿಂಬಿನ ಕೆಳಗಿನಿಂದ ಒಂದು ಕಾಗದ ತೆಗೆದು, "ಜವಾಬು ಬಂತು, ಅಮ್ಮಾ!" ಎಂದಳು.

"ಎಲ್ಲಿ ನೋಡೋಣ!—" ಎಂದು ಆ ಹುಡುಗಿಯ ಕೈಯಿಂದ ದುರ್ಗಾದೇವಿಯು ಕಿತ್ತುಕೊಂಡೇ ಬಿಟ್ಟಳು. ಮರುಕ್ಷಣವೇ ತನ್ನ ಉದ್ರೇಕಾತಿಶಯವನ್ನು ತಡೆದುಕೊಂಡು ಕಾಗದವನ್ನು ಎರಡೂ ಕೈಗಳಲ್ಲಿಯೂ ಮುಚ್ಚಿಕೊಂಡು ಸುಮ್ಮನೆ ಕುಳಿತಿದ್ದಳು. ತೆಗೆದು ಓದಲೇ ಎಂದೊಂದು ಸಲ ಯೋಚಿಸಿದಳು. ಮತ್ತೆ, ಉಹು ಸರಿಯಲ್ಲ ಅಂದುಕೊಂಡಳು. ಹುಡುಗಿಯೇ ಕೈಯಲ್ಲಿ ಕೊಟ್ಟಿದ್ದರೂ ತಾಯಿಯಾಗಿ ಮಗಳ ಕಾಗದವನ್ನು ಹೇಗೆತಾನೆ ಓದಿಯಾಳು?

"ಅತುಲನೇನು ಬರೆದಿದ್ದಾನೆ ಮಗು?" ಎಂದು ತಗ್ಗಿದ ಧ್ವನಿಯಲ್ಲಿ ತಾಯಿಯು ಕೇಳಿದಳು.

ಇಷ್ಟರಲ್ಲಿ ಜ್ಞಾನದಾ ಮಗ್ಗುಲು ಬದಲಾಯಿಸಿಕೊಂಡು ಮಲಗಿದ್ದಳು. "ಇಲ್ಲಿಗೆ ಬಂದಿರುವುದು ಉಚಿತವಲ್ಲ........ಇದೇ ಎಲ್ಲಾ ಬರೆದಿದ್ದಾರೆ!" ಎಂದು ಮಗಳು ಸಂಕ್ಷೇಪದಲ್ಲಿ ಹೇಳಿದಳು.

ಕಾಗದದಲ್ಲಿನ ಈ ಎರಡು ಮಾತುಗಳನ್ನು ಕೇಳಿ ತಾಯಿಯ ಕಣ್ಣಿನಲ್ಲಿ ನೀರು ತುಂಬಿಬಂತು. 'ಇಲ್ಲಿಗೆ ಬಂದಿರುವುದು ಉಚಿತವಲ್ಲ—ಇವೇ ಎಲ್ಲಾ ಬರೆದಿದ್ದಾರೆ' ಎಂಬ ಮಾತು ಅವಳ ಹೃದಯವನ್ನು ಆವರಿಸಿಬಿಟ್ಟಿತು. ದುರ್ಗಾದೇವಿಯ ಹೃದಯವು ಮಾತೃಸ್ನೇಹದಿಂದ ತುಂಬಿಹೋಯಿತು. ಅವಳು ಅತುಲನ ಮುಖವನ್ನು ಸ್ಮರಿಸಿಕೊಂಡು ಅವನಿಗೆ ಅಸಂಖ್ಯ ಆಶೀ

ರ್ವಾದಗಳನ್ನಿತ್ತಳು. "ಆ ಮಗುವಿಗೆ ಈಗೆಷ್ಟು ಅಂತಗ್ಲಾನಿಯೋ, ಎಷ್ಟು ಮರ್ಮ ಬೇಧಿಸುವ ದುಃಖವೋ—ಅವೆಲ್ಲವೂ ಈ ಮಾತುಗಳಲ್ಲಿ ತುಂಬಿದೆ! ಇಲ್ಲಿಗೆ ಬಂದು ಜ್ಞಾನದಾ ಜ್ವರಪೀಡಿತಳಾದಳು— ಅದಕ್ಕೇನೆ ಅಂದು ಆ ಹುಡುಗ ಕುಪಿತನಾಗಿ ಇವರ 'ಗಂಗಾಯಾತ್ರೆ'ಯನ್ನು ನೋಡಲು ಕಲ್ಕತ್ತೆಯಿಂದ ಬಂದಿದ್ದೇನೆಂದು ಹೇಳಿದ! ನಿಜವೇ! ನಾನೇನುಬೇಕಾದರೂ ಮಾಡಬಹುದಾಗಿತ್ತು. ಎಲ್ಲಿಗೆಬೇಕಾದರೂ ಹೋಗಬಹುದಾಗಿತ್ತು. ಆದರ ಮಾತೇ ಬೇರೆ! ಆದರೆ ಹುಡುಗಿಯನ್ನು ಕರೆದುಕೊಂಡು ಈ ಖಾಯಿಲೆ ಮನೆಗೆ ಬಂದದ್ದು ಎಂದಿಗೂ ಸರಿಯಲ್ಲ. ಎಷ್ಟು ಕಷ್ಟ ಬಂದಿದ್ದರೂ ನಾವು ಸಹಿಸಿಕೊಂಡು ಅಲ್ಲಿಯೇ ಬಿದ್ದಿರಬೇಕಾಗಿತ್ತು."

ಆ ಕಾಗದವನ್ನು ದುರ್ಗಾದೇವಿಯು ಅಪೂರ್ವ ಮಮತೆಯಿಂದ ಕೈಯಲ್ಲಿ ಹಿಡಿದಿದ್ದಳು. ಹಿಂದಿನೆಷ್ಟೋ ಮಾತುಗಳು ಸ್ಮರಣೆಗೆ ಬರತೊಡಗಿದವು— ಪತಿಯ ಮೃತ್ಯುಶಯ್ಯೆಯ ಮೇಲೆ ಮಾಡಿದ ಪ್ರತಿಜ್ಞೆ, ಇಲ್ಲಿಗೆ ಬರುವ ದಿನ ಸ್ವರ್ಣಮಂಜರಿಯ ಸಂಗಡ ಆಡಿದ ಜಗಳ. ಆ ದಿವಸ ಅತುಲನು ಕಲ್ಕತ್ತೆಯಿಂದೇತಕ್ಕೆ ಓಡಿಬಂದಿದ್ದನೆಂಬುದರ ರಹಸ್ಯವು ಅವನ ತಾಯಿಗೆ ಗೊತ್ತಾಗಿದೆ, ನೆರೆಹೊರೆಯವರು ಕೇಳಿದ್ದಾರೆ, ಈವರೆಗೆ ಪ್ರಾಯಶಃ ಊರಿನವರೆಲ್ಲರಿಗೂ ಗೊತ್ತಾಗಿಬಿಟ್ಟಿರಬಹುದು. ಆನಂದ ಹಾಗು ಒಂದು ಬಗೆಯ ಹೆಮ್ಮೆಯಿಂದ ದುರ್ಗಾದೇವಿಯ ಹೃದಯ ಕಲಶವು ಪರಿಪೂರ್ಣವಾಯಿತು. "ಹುಡುಗಿ ಕರಿಕಾಳಿ! ನನ್ನ ಕರಿಕಾಳಿಯ ಗೌರವ, ಸೌಭಾಗ್ಯಗಳನ್ನು ಜನಗಳು ಇಂದು ನೋಡಲಿ! ಕೋಗಿಲೆಯೂ ಕಪ್ಪು; ಹೌದು ಭ್ರಮರವೂ ಕಪ್ಪು!" ಎಂದು ಮನದೊಳಗೇ ಅವಳು ಅಂದುಕೊಂಡಳು.

"ಈಗ ಮೈಗೆ ಹೇಗಿದೆ ಜ್ಞಾನು?"

"ಸರಿಯಾಗಿದೆಯಮ್ಮಾ."

"ನನ್ನ ವಿಚಾರ ಅತುಲನೇನಾದರೂ ಬರೆದಿದ್ದಾನೆಯೇ?"

"ಓದಿ ನೋಡಮ್ಮಾ."

ದುರ್ಗಾದೇವಿಯಿಂದ ಇನ್ನು ಕುತೂಹಲವನ್ನು ತಡೆಗಟ್ಟಲಾಗಲಿಲ್ಲ. ಕಿಟಕಿಯ ಬೆಳಕಿಗೆ ಹೋಗಿ ಕಾಗದವನ್ನು ಬಿಚ್ಚಿ ನೋಡತೊಡಗಿದಳು. ಇಷ್ಟು

ದೊಡ್ಡ ಕಾಗದದಲ್ಲಿ ಕೇವಲ ಎರಡುಸಾಲು ಬರೆದಿರುವುದನ್ನು ನೋಡಿ, ಆವಸರದಲ್ಲಿ ಹುಡುಗಿಯು ಬೇರೆ ಯಾವುದೋ ಕಾಗದವನ್ನು ಕೊಟ್ಟುಬಿಟ್ಟಿದ್ದಾಳೆಂದುಕೊಂಡಳು. ಆದರೆ ಮರುಕ್ಷಣವೇ ಮೇಗಡೆಯ ಲ್ಲಿಯೇ ಮಾ॥ ಶೀ॥ ಯುವರ ಚರಣ ಸನ್ನಿಧಿಯಲ್ಲಿ ಎಂದು ಬರೆದಿರುವುದನ್ನು ನೋಡಿ ಒಳಗೇ ನಕ್ಕು "ಅದಕ್ಕೇ ಮಗು, ಓದುವುದಕ್ಕೆ ಕೊಟ್ಟಿದ್ದಾಳೆ. ಇದು ನನ್ನ ಹೆಸರಿಗೆ ಬಂದ ಕಾಗದ" ಎಂದಳು.

ಕಾಗದದಲ್ಲಿ, "ನಾನು ಆ ದಿವಸವೇ ಆ ಕೋಂಪೆಯು ಮಲೇರಿಯಾ ಭಂಡಾರವೆಂದು ಹೇಳಿದ್ದೆ. ಜ್ಞಾನದಾಗೆ ಜ್ವರಬಂದಿದೆಯೆಂದು ಕೇಳಿ ದುಃಖವಾಯಿತು. ಜಾಗ್ರತೆ ವಾಸಿಯಾಗಲೆಂದು ಬಯಸುತ್ತೇನೆ. ನಾವೆಲ್ಲಾ ಸುಖವಾಗಿದ್ದೇವೆ. ನನ್ನ ವಂದನೆ ತಿಳಿಸಿ. ಇತಿ," ಎಂದಿತ್ತು.

ಮಗಳನ್ನು ಕೇಳಲು ತಾಯಿಯು ಮೊದಲು ಸಂಕೋಚಪಟ್ಟಳು. ಎಷ್ಟಾದರೂ ಮಾತೃಹೃದಯವಲ್ಲವೇ! ಕೇಳದೆ ಸುಮ್ಮನಿರಲು ಅವಳಿಂದ ಆಗಲಿಲ್ಲ. ಮಗಳ ಬಳಿ ಕುಳಿತು, ಸಿಕ್ಕುಸಿಕ್ಕಾದ, ಕೆದರಿದ ಅವಳ ಕೂದಲಿನಲ್ಲಿ ಬೆರಳುಗಳನ್ನಾಡಿಸುತ್ತಾ ಮೆಲುದನಿಯಲ್ಲಿ, "ನಿನಗೆ ಬರೆದಿರುವ ಕಾಗದದಲ್ಲಿ ಅತುಲನು ಕೋಪ ಪ್ರಕಟಮಾಡಿರಬಹುದೋಂತ ಕಾಣುತ್ತೆ" ಎಂದು ದುರ್ಗಾದೇವಿಯು ಹೇಳಿದಳು.

ಜ್ಞಾನದಾ ಆಚ್ಚರಿಯಿಂದ ಮುಖ ತಿರುಗಿಸಿದಳು. "ನನಗೆ ಬೇರೆ ಯಾವ ಕಾಗದವಮ್ಮಾ. ಇದೊಂದೇ ಅವರು ಬರೆದಿರುವ ಕಾಗದ—ಅದೂ ನಿಮಗೆ!"

ದುರ್ಗಾದೇವಿಯು ಕೊಂಚ ಮುಸಿನಕ್ಕು ಹೇಳಿದಳು—"ನಾನೇನು ಅದನ್ನು ನೋಡಬೇಕು ಅನ್ನುವುದಿಲ್ಲ ಮಗು. ನಿನಗೆ ಕಾಗದ ಬಂತೋಂತ ಕೇಳಿದರೆ ನನಗೆ ಒಂದು ತರಹ ಸುಖವಾಗುತ್ತೆ. ಕೋಪಗೊಂಡು, ನಿನ್ನ ಕಾಗದದಲ್ಲಿ ಚೆನ್ನಾಗಿ ಬೈಗಳ ಮಳೆ ಸುರಿಸಿದ್ದಾನೆ ನನಗೆ ಗೊತ್ತು—"

ಜ್ಞಾನದಾ ಅಷ್ಟರಲ್ಲಿಯೇ ಹೇಳಿದಳು—"ಇಲ್ಲವಮ್ಮಾ ಅಂದರೆ. ನಾನು ನಿಜ ಹೇಳುತ್ತಾ ಇದ್ದೀನಮ್ಮ. ನನಗೆ ಅವರು ಪ್ರತ್ಯೇಕ ಕಾಗದ ಪತ್ರವೇನೂ ಬರೆದಿಲ್ಲವಮ್ಮ. ಬಂದದ್ದು ಇದೊಂದೇ ಕಾಗದ—ನಿನಗೆ."

ಜ್ಞಾನದಾ ಪುನಃ ಮಗ್ಗಲು ಬದಲಾಯಿಸಿದಳು.

"ಹಾಗಾದರೆ ಇವೇ ಎರಡು ಸಾಲುಗಳು! ಬೇರೆ ಯಾವ ಸಮಾಚಾರವೂ ಇಲ್ಲವೆ?" ಎಂದುಕೊಂಡು, ದುರ್ಗಾದೇವಿಯು ಸುಮ್ಮನಾದಳು. ಇದುವರೆಗೂ ಮಗಳ ಕೂದಲಿನ ಮಧ್ಯದಲ್ಲಿ ವಕ್ರವಕ್ರ ಗತಿಯಲ್ಲಿ, ವಿಚಿತ್ರವಾಗಿ ಓಡಾಡುತ್ತಿದ್ದ ಕೈಬೆರಳುಗಳು ಇದ್ದಕ್ಕಿದ್ದ ಹಾಗೆಯೇ ನಿಂತು ಕಟ್ಟಿಗೆಯಂತಾದವು. ಅವಳು ಹಾಗೆಯೇ ಬಹಳ ಹೊತ್ತು ಸುಮ್ಮನೆ ಕುಳಿತಿದ್ದಳು.

ಆದರೂ ಮೊದಲಿನಂತೆಯೇ ದಿನವೇನೋ ತಳ್ಳುತ್ತಲೇ ಇತ್ತು.

೫

ಆದಿಮಾರ್ಗಶಿರದ ತಣ್ಗಾಳಿ ಬೀಸತೊಡಗಿತ್ತು. ದುರ್ಗಾದೇವಿಯ ಒಬ್ಬ ಬಾಲ್ಯಸ್ನೇಹಿತಳು ತವರುಮನೆಗೆ ಬಂದಿದ್ದಳು. ಒಂದು ಮಧ್ಯಾಹ್ನ ಹುಡುಗಿಯು ಕೊಂಚ ಹುಷಾರಾಗಿರುವುದನ್ನು ನೋಡಿ ದುರ್ಗಾದೇವಿಯು ಗೆಳತಿಯನ್ನು ನೋಡಿಕೊಂಡು ಬರುವ ಸಲುವಾಗಿ ಅವಳ ಮನೆಗೆ ಹೊರಟಳು. ದಾರಿಯಲ್ಲಿ ಪೋಸ್ಟ್ಮನ್ನನ್ನು ನೋಡಿ, "ಏನಪ್ಪ, ದಾಸು, ನನ್ನ ಹೆಸರಿನ ಕಾಗದಪತ್ರಗಳು ನನಗೆ ತಲಪುವುದೇ ಇಲ್ಲವಲ್ಲ?" ಎಂದು ಕೇಳಿದಳು.

ದಾಸು ನಕ್ಕ. "ಕಾಗದವೇ ಬರೋದಿಲ್ಲ. ಇನ್ನು ನಿಮಗೆ ತಲಪುವುದಾದರೂ ಹೇಗೆ?"

"ನನಗಾಗಲಿ ಅಥವಾ ನನ್ನ ಮಗಳು ಜ್ಞಾನಾದಾಗಾಗಲಿ ಯಾವ ಕಾಗದವೂ ಬರುವುದಿಲ್ಲವೇ?'' ಎಂದು ದುರ್ಗಾದೇವಿಯು ಸಂದೇಹದಿಂದ ಕೇಳಿದಳು.

''ಬಂದಿದ್ದರೆ ನಾನು ಖಂಡಿತ ತಂದುಕೊಡುತ್ತಿದ್ದೆ ತಾಯಿ. ಮನೆ ಮನೆಗೂ ಕೊಡುವವನು ನಾನೇ ಅಲ್ಲವೇ?"

ಆದರೂ ದುರ್ಗಾದೇವಿಯು, ''ಹಾಗಲ್ಲ ದಾಸು, ನಿನ್ನ ಚೀಲದಲ್ಲಿ ಒಂದು ಸಲ ಚೆನ್ನಾಗಿ ನೋಡು. ಇವತ್ತು ಯಾವುದಾದರೂ ಕಾಗದ ಬಂದಿರಬಹುದು. ಮೂರ್ರು ಮೂರು ಕಾಗದ ಬರೆದುದಾಗಿದೆ. ಒಂದಕ್ಕೂ ಉತ್ತರ ಕೊಟ್ಟಿಲ್ಲವೇ? ನನ್ನ ಅತುಲ ಅಂತಹವನಲ್ಲವೇ ಅಲ್ಲ" ಎಂದಳು.

ಆದರೆ ದಾಸುವು ಸುಮ್ಮನೆ ಕಷ್ಟಪಡಲಿಲ್ಲ. "ಇಲ್ಲ ತಾಯಿ, ನಿಮಗೆ ಯಾವ ಕಾಗದವೂ ಇಲ್ಲ. ಬಂದರೆ ನಿಮಗೆ ತಲುಪೇ ತಲುಪುತ್ತೆ."

ಹೊರಡಲನುವಾದ ಅವನನ್ನು ದುರ್ಗಾದೇವಿಯು ತಡೆದಳು. "ಒಳ್ಳೆಯದು ದಾಸು. ಕಾಗದ ಒಂದು ವೇಳೆ ಎಲ್ಲೋ ನಿಮ್ಮ ಆಫೀಸಿನಲ್ಲೇ ಬಿದ್ದಿದ್ದರೂ ಬಿದ್ದಿರಬಹುದು. ಪೋಸ್ಟಮಾಸ್ಟರಿಗೆ ನಮ್ಮ ಹೆಸರು ಗೊತ್ತಿಲ್ಲ. ಆದರಿಂದ ನಮ್ಮ ಹೆಸರಿಗೆ ಬಂದ ಕಾಗದ ಟೇಬಲ್ಲಿನಲ್ಲಿ ಎಲ್ಲಿಯೋ ಬಿದ್ದಿರಬೇಕು. ನಿಮ್ಮ ಕಣ್ಣಿಗೂ, ಅದು ಬಿದ್ದಿಲ್ಲ ಅಂತ ಕಾಣುತ್ತೆ. ನಾನು ಹೇಗೂ ನಿನಗೂ ಇಲ್ಲಿಯವರೆಲ್ಲರಿಗೂ ಗೊತ್ತಲ್ಲ ಒಂದು ಸಲ ನಾನೇ ಹೋಗಿ ಹುಡುಕಲು ಸಾಧ್ಯವಿಲ್ಲವೇ?

ದುರ್ಗಾದೇವಿಯ ವ್ಯಾಕುಲತೆಯನ್ನು ನೋಡಿ ದಾಸುವಿಗೆ ದಯೆ ಬಂತು. "ಹುಡುಕಲು ಅದೇಕೆ ಸಾಧ್ಯವಿಲ್ಲ ತಾಯಿ? ಆದರೆ ಹುಡುವುದರಿಂದ ವೃಥಾಶ್ರಮ ಅಷ್ಟೆ. ಒಳ್ಳೆಯದು ಇವತ್ತು ನಾನೇ ವಾಪಸ್ಸು ಹೋದಮೇಲೆ ಒಂದುಸಲ ಚೆನ್ನಾಗಿ ಹುಡುಕಿ ನೋಡುತ್ತೇನೆ. ಕಾಗದವೇನಾದರೂ ಸಿಕ್ಕರೆ ತತ್‌ಕ್ಷಣ ತಂದು ಕೊಡುತ್ತೇನೆ."

ಹೆಚ್ಚು ಸಮಯ ಕಳೆಯದೆ ಅವನು ಹೊರಟು ಹೋದನು.

ದುರ್ಗಾದೇವಿಯು, ಈ ಪ್ರಪಂಚದಲ್ಲಿನ ಸಮಸ್ತ ದೇವಿದೇವರುಗಳಲ್ಲಿಯೂ ಸಾವಿರಾರು ಬಗೆಯಿಂದ ಮೊರೆಯಿಟ್ಟಳು. "ಹೇ ದುರ್ಗಾಮಾತೆ, ಹೇ ಕಾಳಿಕಾಂಬ—ಹುಡುಕುವುದರಿಂದ ಒಂದು ಕಾಗದ ಸಿಗದೇ! ಸಿಕ್ಕುವಂತಾಗಲಿ."

ಜ್ಞಾನವಿದೆಗೆ ಇಷ್ಟು ಹೆಚ್ಚು ಖಾಯಿಲೆಯೆಂದು ತಿಳಿದು ಕೂಡ ಅತುಲನು ಉತ್ತರ ಬರೆಯಲಿಲ್ಲವೆಂದೆಲ್ಲಿಯಾದರೂ ವಿಶ್ವಾಸಪಟ್ಟಾರೆ? ಅವನು ಅವಶ್ಯವಾಗಿ ಪತ್ರ ಬರೆದಿದ್ದಾನೆ. ಮಧ್ಯೆ ಎಲ್ಲೋ ಗಲಾಟೆಯಲ್ಲಿ ಅದು ಗೈರುವಿಲೆಯಾಗಿ ಬಿಟ್ಟಿದೆ. ಇದೇ ದುರ್ಗಾದೇವಿಯ ಯೋಚನೆ.

ಅಯ್ಯೋ ಮನುಷ್ಯನ ಆಸೆಯೆ! ಒಂದು ಸಾವಿರ, ಒಂದು ಲಕ್ಷ, ಒಂದು ಕೋಟಿ ಸಂಭವ ಅಸಂಭವ ಕಲ್ಪನೆಗಳ ಮಧ್ಯದಲ್ಲಿ—ಅತುಲನ ಮನಸ್ಸು ಈಚೆಗೆ ಬದಲಾಯಿಸಿರಬಹುದಾದ ಸಂಭವವೂ ಇದೆ, ಬದಲಾಯಿಸಿಯೂ

ಇರಬಹುದೆಂದು ಒಂದುಸಲವಾದರೂ ದುರ್ಗಾದೇವಿಗೆ ಅನ್ನಿಸಲಿಲ್ಲವಲ್ಲ! ಅತುಲನ ಇಚ್ಛೆಯು ಒಂದುಕಾಲದಲ್ಲಿ ಏಕಾಂತವಾಗಿತ್ತು; ಗುಪ್ತವಾಗಿತ್ತು; ನಿರ್ವಿವಾದವಾಗಿತ್ತು; ಒಂದು ಸಣ್ಣ ಸಂಪೂರ್ಣಾವರಣದೊಳಗೆ ತಾನೇ ತಾನಾಗಿ ಲೀನವಾಗಿತ್ತು. ಇದ್ದಕ್ಕಿದ್ದ ಹಾಗೆಯೇ ಶೀರ ಅಕಾಲದಲ್ಲಿ, ಸಾರ್ವಜನಿಕವಾಗಿ ಅದನ್ನು ಹೊರಕ್ಕೆ—ಬೆಳಕಿಗೆ ಎಳೆದುದರಿಂದ ಅದು ಒಣಗಿ ಹೋದರೂ ಹೋಗಬಹುದೆಂಬ ಕಲ್ಪನೆಯು ಸಹ ಅವಳಿಗೆ ಬರಲಿಲ್ಲವಲ್ಲ! ಹಾಗೆ ಮರೆಯಲ್ಲಿದ್ದು ಒಮ್ಮೆಲೇ ಬೆಳಕಿಗೆ ಬಂದ ಸಮಯದಲ್ಲಿ ನೂರಾರು ವಿರುದ್ಧ ಶಕ್ತಿಗಳು ಏಕೀಭೂತವಾಗಿ ಸಾವಧಾನದಿಂದ ಸುತ್ತುಗಟ್ಟಿ ಒಂದು ಕ್ಷಣದಲ್ಲಿ ಆ ಇಚ್ಛೆಯನ್ನು ಕೊಂದು ಬಿಡಲು ಸಾಧ್ಯವೆಂದು ಸಹ ಅವಳು ಯೋಚಿಸಲಾರದಾದಳೇ! ಮನುಷ್ಯನು ಯಾವಾಗಲೂ ಅಷ್ಟೆ—ಸ್ವಾರ್ಥಾಂಧ!

ದುರ್ಗಾದೇವಿಯು ಜಾಗ್ರತೆಯಾಗಿಯೇ ಗೆಳತಿಯ ಮನೆಯಿಂದ ಹಿಂತಿರುಗಿದಳು. ಮಗಳ ಕೊಠಡಿಯೊಳಕ್ಕೆ ಪ್ರವೇಶಿಸುತ್ತಿದ್ದ ಹಾಗೆಯೇ ಅವಳ ಮೊದಲ ಪ್ರಶ್ನೆ? "ಲೇ, ಜ್ಞಾನು, ದಾಸು ಯಾವುದಾದರೂ ಕಾಗದ ತಂದು ಕೊಟ್ಟು ಹೋದನೆ?"

"ಇಲ್ಲವಮ್ಮಾ."

ಇಂದಿಗೆ ಎರಡು ತಿಂಗಳಾಯಿತು. ಮೂರು ಮೂರು ಕಾಗದ ಬರೆದಾಗಿದೆ. ಒಂದಕ್ಕಾದರೂ ಉತ್ತರವಿಲ್ಲ. ದುರ್ಗಾದೇವಿಯು ಸಂಶಯಾವೃತಳಾಗಿ, "ನೀನು ಸಿದ್ದೆ ಮಾಡುತ್ತಿದ್ದೇಂತ ಕಾಣುತ್ತದೆ. ಯಾರೂ ಉತ್ತರ ಕೊಡದಿದ್ದುದರಿಂದ ಕೂಗಿ ಕೂಗಿ ಸಾಕಾಗಿ ದಾಸು ಕಾಗದವನ್ನು ವಾಪಸ್ಸು ತೆಗೆದುಕೊಂಡು ಹೋಗಿರಬಹುದು. ನಾನೂ ಮನೆಯಲ್ಲಿರಲಿಲ್ಲ. ನಿನಗೆ ಒಂದು ದಿನವಾದರೂ ಮಧ್ಯಾಹ್ನದ ಹೊತ್ತು ಕೊಂಚ ಎದ್ದು ಕುಳಿತಿರುವುದಕ್ಕೆ ಆಗುವುದಿಲ್ಲವೇನೆ?" ಎಂದು ಮುಖ ಸೊಟ್ಟಗೆ ಮಾಡಿಕೊಂಡು ಹೊರಟು ಹೋದಳು.

ಜ್ಞಾನದಾ ನಿಜವಾಗಿಯೂ ಕುಳಿತೇ ಇದ್ದಳು. ಅವಳು ಮಲಗಿರಲಿಲ್ಲ-- ಎಚ್ಚರವಾಗಿ ಸುಮ್ಮನೆ ಕುಳಿತಿದ್ದಳು. ಹಾಗೆಂದು ಹೇಳಿ ತಾಯಿಯೊಡನೆ ಚರ್ಚೆಮಾಡುವುದು ಸರಿಯಲ್ಲವೆಂದು ಕಂಡುಕೊಂಡಳು. ತಾಯಿಗೆ ದಿನಂಪ್ರತಿ ಒಂದೇ ಉತ್ತರವನ್ನು ಹೇಳಿ ಹೇಳಿ ಅವಳೇ ಬೇಸತ್ತು ಭೂಮಿಗಿಳಿದು ಹೋಗಿದ್ದಳು.

ದುರ್ಗಾದೇವಿಯು ಪುನಃ ಹಿಂತಿರುಗಿ ಬಂದು, "ಇದ್ಯಾಕೆ? ದಾಸು ಇವತ್ತು ಹುಡುಕಿ ಕಾಗದವನ್ನು ತಂದೇ ತರುತ್ತೇನೆಂದು ಹೇಳಿದ್ದನಲ್ಲ?" ಎಂದಳು.

ಅದೇಕೋ ಗೊತ್ತಿಲ್ಲ, ಅತುಲನ ಕಾಗದ ಅಂದು ಬಂದೇ ಬಂದಿದೆ ಯೆಂದು ಅವಳ ಮನದಲ್ಲಿ ಸಂಪೂರ್ಣ ವಿಶ್ವಾಸ ನೆಟ್ಟು ಬಿಟ್ಟಿತ್ತು.

ಹುಡುಗಿಯು ಏನೊಂದು ಉತ್ತರವನ್ನೂ ಕೊಡಲಿಲ್ಲ. ಅವಳು ಆ ಕೊಳಕು ಹಾಸಿಗೆಯಲ್ಲಿಯೇ ಮುಖ ಮುಚ್ಚಿಕೊಂಡಳು. ದುರ್ಗಾದೇವಿಗೆ ಅಲ್ಲಿಗೇ ಸಮಾಧಾನವಾಗಲಿಲ್ಲ. ತನ್ನ ಅಣ್ಣನ ಮಗನನ್ನು ಪೋಸ್ಟ್ ಆಫೀಸಿಗೆ ಕಳುಹಿಸಿ ದಾಸುವು ಕಾಗದ ತೆಗೆದುಕೊಂಡು ಬಂದಿರಲಿಲ್ಲವೆಂಬ ಸುದ್ದಿ ತರಿಸಿ ಕೊಂಡಳು.

ಉತ್ತರ ಬರುವುದೆಂಬ ಆಸೆಯಿಂದ ಪ್ರತೀಕ್ಷಿಸುತ್ತಿದ್ದ ದುರ್ಗಾದೇವಿಯು ಆಮೇಲಿನ ಮೂರು ನಾಲ್ಕು ದಿನಗಳನ್ನು ಮುಳ್ಳುಹಾಸಿಗೆಯ ಮೇಲೆ ಕಳೆದಂತೆ ಬಹು ಪ್ರಯಾಸದಿಂದ ಕಳೆದಳು. ಹಗಲು ರಾತ್ರಿ ಕಾಗದ ಬರುವುದೆಂದು ಈಕ್ಷಿಸುತ್ತಾ ತಡಪಡಿಸುತ್ತಿದ್ದಳು. ಕಡೆಗೆ ಅವಳು ನಿರಾಶಳಾಗಿ ಅತುಲನ ತಾಯಿಗೆ ಕಾಗದ ಬರೆದಳು. ಅತುಲನ ತಾಯಿಯು ಅತುಲನು ಕಲ್ಕತ್ತೆಯ ಲ್ಲಿಯೇ ಇರುವನೆಂದೂ, ಮೊದಲಿನಂತೆಯೇ ಓದುಬರಹಗಳಲ್ಲಿ ಮಗ್ನನಾಗಿ ಸುಖವಾಗಿರುವನೆಂದೂ ಉತ್ತರ ಬರೆದಳು.

ದುರ್ಗಾದೇವಿಗೆ ಆ ಕಾಗದವಲ್ಲಿ ಉಪೇಕ್ಷೆಯ ಸ್ವರ ಕಂಡುಬಂತು. ಹೀಗೆಯೇ ಮಾರ್ಗಶಿರವೂ ಕಳೆಯಿತು; ಪುಷ್ಯವೂ ಕಳೆದು ಹೋಯಿತು. ಅತುಲನಿಂದ ಕಾಗದವೇನೋ ಬರಲಿಲ್ಲ. ಮಾಘದ ಮಧ್ಯದಲ್ಲಿ ಅಂತೂ ಇಂತೂ ಓಲಕ್ಷ್ಮಣಾಂತ ಹುಡುಗಿಯು ಕೊಂಚ ಸುಧಾರಿಸಿಕೊಂಡು ಎದ್ದು ಕುಳಿತುಕೊಳ್ಳುವ ಹಾಗಾದಳೆಂದರೆ ತಾಯಿಯು ಖಾಯಿಲೆ ಬಿದ್ದಳು. ಇಷ್ಟು ಭಾರಿ ನಿರಾಶೆಯ ಪೆಟ್ಟನ್ನು ಸಹಿಸುವ ಶಕ್ತಿ ಅವಳಲ್ಲಿರಲಿಲ್ಲ.

ಅದೂ ಅಲ್ಲದೆ ಅವಳಿಗೆ ಈ ಅತ್ತಿಗೆ-ಭಾಮಿನಿಯ ವಿಚಾರದಲ್ಲಿ ಮಿತಿ ಮೀರಿದ ವಿದ್ವೇಷ ಉತ್ಪನ್ನವಾಗಿ ಬಿಟ್ಟಿತ್ತು. ಅತ್ತಿಗೆಯ ವಿಚಾರ ಯಾವಾಗ ಲಾದರೂ ಉಲ್ಲೇಖಿಸಬೇಕಾದ ಸಂದರ್ಭಬಂದರೆ ನಿಷ್ಠುರತೆಯಿಂದ ಅವಳನ್ನು

'ತೊಳೆದ ಕೆಂಡ' 'ತಾಟಕಿ' ಅಂತ ಕರೆಯುತ್ತಿದ್ದಳು. ದಿನಗಳು ತಳ್ಳಿದಂತೆಲ್ಲಾ ಈ ನಿಷ್ಠುರತೆ ಹಾಗು ವಿದ್ವೇಷ ಹೆಚ್ಚುತ್ತಹೋಯಿತು. ಆದಕ್ಕೆ ಇನ್ನೊ ಒಂದು ಕಾರಣವಿತ್ತು. ಜ್ಞಾನದೆಯ ಸ್ವಭಾವ ಮಾಧುರ್ಯದಿಂದ ಮುಗ್ಧಳಾಗಿಯೋ ಅಥವಾ ಸಮಾನ ರೂಪವತಿಯೆಂಬ ಅಭಿಮಾನದಿಂದಲೋ ತಿಳಿಯದು. ಅಂತೂ ಆ 'ತೊಳೆದ ಕೆಂಡ'ವು ತನ್ನದೇ ಆದ ಒಂದು ವಿಶಿಷ್ಟ ರೀತಿಯಲ್ಲಿ ಜ್ಞಾನದೆಯನ್ನು ಪ್ರೀತಿಸತೊಡಗಿದ್ದಿತು; ಅವಳ ಸೇವೆಗೈಯುತ್ತಿತ್ತು; ಅವಳನ್ನು ಪ್ರೀತ್ಯಾದರಗಳಿಂದ ನೋಡಿಕೊಳ್ಳುತ್ತಿತ್ತು. ಆದರೆ ಈ ವಾತ್ಸಲ್ಯದಲ್ಲಿ ಉತ್ಕಟವಾದ ಸ್ವಾರ್ಥತೆ ಇದೆಯೆಂದು ಗ್ರಹಿಸಿ ದುರ್ಗಾದೇವಿಯು ಒಳಗೇ ವಿದ್ವೇಷದ ವಿಷದಿಂದ ಉರಿಯತೊಡಗಿದಳು.

ದುರ್ಗಾದೇವಿಯ ದೇಹವು ಭಾರಿ ಭಾರಿ ಸಂಕಟ ಕಷ್ಟಗಳನ್ನು ಅನುಭವಿಸಿದೆ. ಅವಳು ಚಿಕ್ಕಂದಿನಿಂದ ಇದುವರೆಗೆ ಪಾಲಿತಳಾದದ್ದೂ ಆ ಸಂಕಟ ಕಷ್ಟಗಳ ನಡುವೆಯೇ. ಆದುದರಿಂದ ಭಾರಿ ಭಾರಿ ವಿಪತ್ತುಗಳನ್ನು ಸಹ ಅವಳು ಸಾವಧಾನದಿಂದ ಸಹಿಸಿದ್ದಳು. ಆದರೆ ಈಗ ಅವಳಿಂದ ಸಹಿಸಲಾಗಲಿಲ್ಲ. ಮಾಘ ಕಳೆಯುವುದರೊಳಗಾಗಿ ಚೆನ್ನಾಗಿ ಹಾಸಿಗೆ ಹಿಡಿದು ಮಲಗಿಯೇ ಬಿಟ್ಟಳು. ಮಗಳು, "ಅಮ್ಮ ಇನ್ನು ಇಲ್ಲಿರುವುದು ಸರಿಯಲ್ಲಮ್ಮ. ನಮ್ಮೂರಿಗೆ ಹೋಗೋಣ. ಏನೇನು ಆಗಬೇಕೆಂದಿದೆಯೋ ಎಲ್ಲಾ ಅಲ್ಲೇ ಆಗಲಿ." ಎಂದಳು.

ದುರ್ಗಾದೇವಿಯು ಒಪ್ಪಿದಳು. ಇಲ್ಲಿಂದ ಈ ಸಮಯದಲ್ಲಿ ಹೊರಡಲು ಸಮ್ಮತಿಸಲು, ಕೇವಲ ಈ 'ತೊಳೆದ ಕೆಂಡ'ದ ಆದರ, ಆತ್ಮೀಯತೆಗಳ ಬಲೆಯಿಂದ ತಪ್ಪಿಸಿಕೊಂಡು ಆದಷ್ಟು ಬೇಗ ಹೊರಬೀಳಬೇಕೆಂದು ಹಗಲು ರಾತ್ರಿ ಅವಳ ಮನಸ್ಸಿನಲ್ಲಿ ನಿರಂತರವೂ ಕಟಿಯುತ್ತಿದ್ದ ಉತ್ಕಟಾಪೇಕ್ಷೆಯೇ ವಿನಹ ಬೇರೆ ಯಾವ ಕಾರಣವೂ ಇಲ್ಲ.

ತಂಗಿಯು ಹೊರಟು ಹೋಗುವ ಸಮಾಚಾರವನ್ನು ಕೇಳಿ ಶಂಭುಬಾಬುವು ವಿರೋಧಿಸಿದ. ಆಗ ಸುಮಾರು ಬೆಳಗ್ಗೆ ಎಂಟು ಗಂಟೆಯ ಸಮಯ. ಶಂಭುವು ಪ್ರಾತಃಸಂಧ್ಯಾವಂದನೆ ಇತ್ಯಾದಿ ನಿತ್ಯಕರ್ಮಗಳನ್ನು ಮಾಡಿಕೊಂಡು ಚಡಾವನ್ನು ಚಟಪಟ ಅನ್ನಿಸಿಕೊಂಡು ಬರುತ್ತಿದ್ದ ಹಾಗೆಯೇ ಕೂಗಿದ—"ದುರ್ಗಾ !"

ದುರ್ಗಾದೇವಿಯು ತೊಟ್ಟಿಯಲ್ಲಿ ಕಂಭದ ಆಸರೆಯಲ್ಲಿ ಕುಳಿತು ಮುಖ ತೊಳೆಯುತ್ತಿದ್ದಳು. ಜ್ಞಾನದಾ ಸಹಾಯಮಾಡುತ್ತಿದ್ದಳು. ಅಣ್ಣನ ಕೂಗು ಕೇಳಿ, "ಏನಣ್ಣ" ಎಂದಳು.

"ಈವಾಗ ನೀವು ಹೋಗುವುದಕ್ಕಾಗುವುದಿಲ್ಲ."

"ಅದೇಕಣ್ಣ?"

"ಅದೇಕೆ? ನಿಮಗೋಸ್ಕರ ಒಬ್ಬ ದೊಡ್ಡ ಮನುಷ್ಯನ ಹತ್ತಿರ ನಾನು ಮಾತುಕೊಟ್ಟ ವಚನದ್ರೋಹಿ ಆಗಲೇನು? ಅದು ನನ್ನಿಂದ ಸಾಧ್ಯವೇ ಇಲ್ಲ."

ಅಣ್ಣನು ಕೊಟ್ಟ ಮಾತು ಯಾವುದೆಂದು ತಿಳಿಯದಿದ್ದರೂ ಸಹ ದುರ್ಗಾದೇವಿಯ ಹೃದಯವು ಡವ ಡವ ಗುಟ್ಟತೊಡಗಿತು. ಆದರೂ, "ಯಾವ ವಿಚಾರದಲ್ಲಿ ಮಾತು ಕೊಟ್ಟಿದ್ದೀಯಣ್ಣ?" ಎಂದು ಮೆಲ್ಲಗೆ ಕೇಳಿದಳು.

"ಜ್ಞಾನದೆಯ ಮದುವೆಯ ವಿಚಾರದಲ್ಲಿ! ಇನ್ನು ಹೆಚ್ಚು ದಿವಸ ಹುಡುಗಿಯನ್ನು ಹೀಗೆಯೇ ಲಗ್ನವಿಲ್ಲದೆ ನಾನು ಇಟ್ಟುಕೊಂಡಿರಲು ಸಾಧ್ಯವಿಲ್ಲ. ಅದಕ್ಕೇನೆ ನಮ್ಮ ನವೀನಚಂದ್ರನೊಡನೆ ಈ ಫಾಲ್ಗುಣ ಶುದ್ಧ ಪಂಚಮಿಯ ದಿವಸ ಲಗ್ನ ನಿಶ್ಚಯಿಸಿದ್ದಾಗಿದೆ. ಎಲ್ಲಾ ಮಾತುಗಳೂ ನಿಶ್ಚಯವಾಗಿ ಬಿಟ್ಟಿವೆ. ಅವನು ಹುಡುಗಿಗೂ ಒಡವೆ ವಸ್ತು ಏನು ಕಡಿಮೆ ಕೊಡುವುದಿಲ್ಲ. ಇದಕ್ಕಿಂತ ಉತ್ತಮ ಸಂಬಂಧ ಇನ್ನೆಲ್ಲೂ ಸಿಗುವುದಿಲ್ಲವೆಂದೇ ನಾನು ಮಾತು ನಿಶ್ಚಯಿಸಿಯೂ ಬಿಟ್ಟೆ."

ಇದನ್ನು ಕೇಳಿ ದುರ್ಗಾದೇವಿಗೆ ಆಕಾಶವೇ ತಲೆಯಮೇಲೆ ಕಳಚಿ ಬಿದ್ದಂತಾಯಿತು. "ನನ್ನನ್ನು ಕೇಳದೆ ಮಾಡದೆ ನೀನೇಕೆ ಮಾತು ಕೊಟ್ಟೆಯಣ್ಣ? ನಾನು ಬದುಕಿರುವವರೆಗೂ ಈ ಸಂಬಂಧವನ್ನು ಆಗಗೊಡುವುದಿಲ್ಲ."

ಶಂಭುವಿಗೆ ಕೋಪ ಬಂತು. "ಅದು ಹೇಗೆ ಆಗಗೊಡುವುದಿಲ್ಲವೋ ನೋಡಿಬಿಡುತ್ತೇನೆ. ನೀನು ಹೇಳಿಕೊಂಡರೇನಾಯಿತು? ನಾನು ಹುಡುಗಿಯ ಸೋದರಮಾವ – ಅಭಿಭಾವಕ. ನನಗೇನು ಇಷ್ಟಬರುತ್ತದೆಯೋ, ಹೇಗೆ ಹೇಳುತ್ತೇನೆಯೋ ಹಾಗೆ ನಡೆಯುತ್ತದೆ. ನಿನಗೋಸ್ಕರ ನಾನೆಂದಿಗೂ ಕೊಟ್ಟ

ಮಾತನ್ನು ಕಳೆದುಕೊಳ್ಳುವವನಲ್ಲ. ಯಾರು ಬಂದು ಹೇಳಿದರೂ ನನ್ನ ಇರಾದೆಯನ್ನು ಬದಲಾಯಿಸುವುದಿಲ್ಲ—ತಿಳಿಯಿತೆ!"

ದುರ್ಗಾದೇವಿಗೆ ಅಳು ಬಂದೇ ಬಿಟ್ಟಿತು. "ಬೇಡ ಅಣ್ಣಾ, ಬೇಡ. ನಾನು ಸತ್ತರೂ ಇಲ್ಲಿ ನನ್ನ ಮಗಳ ಮದುವೆಮಾಡಲಿಲ್ಲ. ನನ್ನ ಮಗಳಿಗಾಗಿ ನೀನೇನು ಚಿಂತಿಸಬೇಡ" ಎಂದು ಹೇಳುತ್ತ ಹೇಳುತ್ತ ಅವಳಿಗೆ ದುಃಖ ಉಕ್ಕಿ ಬಂತು; ಗಂಟಲು ಉಬ್ಬಿಬಂತು; ಮಾತು ಪೂರೈಯಿಸಲಾಗಲಿಲ್ಲ!

ಈ ಅಳುವನ್ನು ನೋಡಿ ಶಂಭುವು ಕಿಡಿಯಾದ. ಕೆಂಡವನ್ನು ಉಗುಳು ವವನಂತೆ ಅವನು, ಹೇಳತೊಡಗಿದ—"ನೋಡು ದುರ್ಗಾ, ಶುಭ ಮಾರ್ಗ ದಲ್ಲಿ ಅಡ್ಡಿಬರುವುದು, ಶುಭಕಾರ್ಯಕ್ಕೆ ಕಲ್ಲುಹಾಕುವುದು, ಹೀಗೆಲ್ಲ ಅತ್ತು ಕರೆಯುವುದು ನನಗೆ ಸರಿಬೀಳುವುದಿಲ್ಲ. ನಾನು ಒಂದು ಸಲ ಆಗುವುದಿಲ್ಲ ಅಂದ ಮೇಲೆ ಆಗುವುದೇ ಇಲ್ಲ! ......."

ಮಧ್ಯದಲ್ಲಿಯೇ 'ತೊಳೆದ ಕೆಂಡ'ವು ಆ ದೃಶ್ಯದಲ್ಲಿ ಪ್ರತ್ಯಕ್ಷನಾಯಿತು. ಎರಡು ಕೈಯೂ ಸಗಣಿಯ ಮುದ್ದೆಯಾಗಿತ್ತು. ಸಗಣಿ ಎತ್ತಿ ಚೊಕ್ಕಟ ಮಾಡುತ್ತಿದ್ದಳೂಂತ ಕಾಣುತ್ತೆ. ತೊಟ್ಟಿಯೊಳಕ್ಕೆ ಬಂದು ಗಂಡನನ್ನುದ್ದೇ ಶಿಸಿ ತನ್ನ ಸಹಜವಾದ ಒಡಕುತಟ್ಟೆಯ ನಿನಾದದಲ್ಲಿ ಘಂಟಾಘೋಷವಾಗಿ ಮೊದಲುಮಾಡಿದಳು,—"ಸ್ವಲ್ಪ ಹೇಳಿ. ಕೇಳಿಯಾದರೂ ಕೇಳೋಣ. ನೀವು ಹುಡುಕಿರುವ ಆ ಸುಪಾತ್ರ ಯಾರೆಂಬುವುದನ್ನ?"

ಹೆಂಡತಿಯ ಧೋರಣೆ, ಬಂದ ರಭಸ, ನಿಂತಿದ್ದ ರೀತಿಗಳನ್ನು ನೋಡಿ ಶಂಭುಬಾಬುವು ಮೊದಲು ಬೆಪ್ಪಾಗಿ ನಿಂತನಾದರೂ ತೋರಗೊಡದವನಂತೆ, "ಯಾರಾದರೆ ನಿನಗೇನಂತೆ!" ಎಂದು ಉಚಾಯಿಸಿದ.

ಸಗಣಿಯ ಮುದ್ದೆಯಾಗಿದ್ದ ಕೈಯನ್ನು ವೈಯ್ಯಾರದಿಂದ ಆಡಿಸುತ್ತಾ ಆ 'ತೊಳೆದ ಕೆಂಡ'ವು ಸರಸರನೆ ವೈಕುಲುಕಿಸಿಕೊಂಡು ಇನ್ನೂ ಮುಂದೆ ಬಂದು, ಅದೇ ಆ ಸ್ವಾಭಾವಿಕ ಸುಮಧುರ ಸ್ವರದಲ್ಲಿ ಅರ್ಧ ಊರಿಗೆ ಕೇಳಿಸುವಂತೆ ಹೇಳತೊಡಗಿದಳು—"ಮಾವನಂತೆ ಮಾವ! ಮಾವನ ದೊಡ್ಡಸ್ತಿಕೆ ತೋರಿ ಸುವುದಕ್ಕೆ ಬಂದಿದ್ದೀರೋ! ನವೀನನೊಡನೆ ಲಗ್ನಮಾಡಿಸುತ್ತೀರೋ? ನನಗೆ ಗೊತ್ತಾಯಿತು. ಆಗ ನೀವು ಅವನ ಹತ್ತಿರ ಮಾಡಿರುವ ನೂರು

ರೂಪಾಯಿ ಸಾಲ ತಾನಾಗಿಯೇ ತೀರಿಹೋಗುತ್ತಿಲ್ಲವೇ? ಹೌದು, ಅದರಿಂದ ಅವನೇ ಒಳ್ಳೆ ಯೋಗ್ಯವರನಾಗಿ ಬಿಟ್ಟ ಅಲ್ಲವೆ? ಅವನು ನನ್ನ ಅಣ್ಣನಾಗಿ ನನಗೇ ಅವನ ವಿಚಾರ ಗೊತ್ತಿಲ್ಲ, ನಿಮಗೆ ಗೊತ್ತಿದೆ ಅಂತ ತಿಳಕೊಂಡಿದ್ದೀರಾ? ಹೆಂಡ ಕುಡಿದು, ಗಾಂಜಾ ಸೇವಿ—ಐದು ಮಕ್ಕಳ ತಾಯಿ, ಅವನ ಮೊದಲ ಹೆಂಡತಿ, ಎಂಟು ತಿಂಗಳ ಬಸುರಿ—ಅಂತಹವಳನ್ನು ಹೊಟ್ಟೆಯ ಮೇಲೆ ಹೊಡೆದು ಕೊಂದವನು. ಅವನಿಗಿಂತ ಇನ್ನು ಒಳ್ಳೆ ಸುಪಾತ್ರ ಬೇರೆ ಇನ್ನ್ಯಾರು ಇದ್ದಾರು? ಹೀಗೆ ಹೇಳುವುದರ ಬದಲು ನೀವು ಹೋಗಿ ಎಲ್ಲಿಯಾದರೂ ನೇಣುಹಾಕಿಕೊಳ್ಳುವುದು ವಾಸಿ! ಶುದ್ಧ ಅವಮಾನ! ಶುದ್ಧ ನಾಚಿಕೆಗೇಡು!—"

ತಂಗಿ ಹಾಗು ಸೋದರ ಸೊಸೆಯು ಇಮುರಿನಲ್ಲಿ ತನ್ನ ಮೋಸ ಬಯಲಾದ್ದರಿಂದ ಉದ್ಭವಿಸಿದ ಕೋಪವನ್ನು ಶಂಭುಬಾಬುವು ತಡೆಮಕೊಳ್ಳಲಾರದೆ ಹೋದ. ಕಾಲಿನಿಂದ ಚಪಾವು ತೆಗೆದು ಗಟ್ಟಿಯಾಗಿ ಗವರಿದ—"ಮುಚ್ಚೆ, ಮುಚ್ಚೆ, ಬಾಯಿಮುಚ್ಚೆ ರಾಕ್ಷಸಿ!........"

ಆ 'ತೊಳೆದ ಕೆಂಡ'ವು ವೈಪರಿತು ಬಿಟ್ಟಿತು. ಅದು ಮುಖವನ್ನು ಎಷ್ಟು ಭಯಂಕರ ಮಾಡಿಕೊಂಡು ಕೂಗತೊಡಗಿತೆಂಬುದನ್ನು ಕಣ್ಣಿಂದ ನೋಡದ ವಿನಹ ಬರೀ ಬರೆದದ್ದನ್ನು ಓದುವುದರಿಂದ ತಿಳಿಯುವುದು ತೀರ ಅಸಂಭವ. "ಏನಂದ್ರಿ? ರಾಕ್ಷಸಿಯೇ?........ಮತ್ತೊಂದು ಸಲ ಏನಾದರೂ ನಿಮ್ಮ ಬಾಯಿಂದ ಈ ಮಾತು ಹೊರಬಿತ್ತೂಂದರೆ ಉರಿಯುವ ಕೊಳ್ಳಿಯನ್ನು ನಿಮ್ಮ ಗಂಟಲಿಗೆ ತುರುಕದಿದ್ದರೆ ನಾನು ಪಾಂಚೂಘೋಷಾಲನ ಮಗಳೇ ಅಲ್ಲ. ಏನು? ಬಲವಂತದಿಂದ ಹುಡಗಿಯ ಮದುವೆ ಮಾಡುತ್ತೀರಾ? ನೀವ್ಯಾರೂಂತ? ಮಗೂನ ಕರೆದುಕೊಂಡು ಏನೋ ಎರಡು ದಿನ ಹಾಯಾಗಿ ಇದ್ದು ಹೋಗೋಣಾಂತ ಅವಳು ಬಂದಿದಾಳೆ-ಪಾಪ! ಹೀಗೆಲ್ಲಾ ಅವರನ್ನ ಹಗಲು ರಾತ್ರಿ ಬೆದರಿಸುವುದಕ್ಕೆ ನೀವ್ಯಾರು? ತರಕಾರಿ ಹೆಚ್ಚುವ ಚೂರಿ ತೆಗೆದುಕೊಂಡು ಬಾ, ಮಗು; ಭಾವ ಭಾವಮೈದುನ ಇಬ್ಬರ ಮೂಗನ್ನು ಮೊದಲು ಕತ್ತರಿಸಿಬಿಟ್ಟು ಆಮೇಲೆ ಸಾಯುತ್ತೇನೆ. ನನ್ನ ಹೆಸರು ಭಾವಿನಿ-ಜ್ಞಾಪಕದಲ್ಲಿರಲಿ."

ಆ ರಣಚಂಡಿಯ ಮೂರ್ತಿಯ ಮುಂದೆ ಶಂಭುಬಾಬುವು ಪ್ರಜ್ಞಾಹೀನ ನಂತಾದ. ಅವನ ಬಾಯಿಂದ ಪುನಃ ಒಂದು ಶಬ್ದಕೂಡ ಹೊರಡಲಿಲ್ಲ. ಆವನು ಸುಮ್ಮನೆ ತನ್ನ ಕೊಠಡಿಯೊಳಕ್ಕೆ ಹೊರಟು ಹೋದ.

ನಂತರ ಆ 'ತೊಳೆದ ಕೆಂಡ'ವು ದುರ್ಗಾದೇವಿಯ ಕಡೆ ತಿರುಗಿತು. "ಇದೇನು ಸಾಮಾನ್ಯ ಅಂತ ತಿಳಿದುಕೊಂಡಿದ್ದೀಯೇನು ದುರ್ಗಾ! ನೀವು ಬಂದಾಗಿನಿಂದ ಒಂದೇ ಸಮನೆ ಲೆಕ್ಕಹಾಕಿದೆ. ಈ ಬಂಗಾರದ ಬೊಂಬೆ ಯನ್ನು ತೆಗೆದುಕೊಂಡು ಹೋಗಿ ಆ ಕೋತಿ ಕೊರಳಿಗೆ ಕಟ್ಟಿಬಿಟ್ಟರೆ ನಮ್ಮಣ್ಣ ನಿಗೆ ಕೊಡಬೇಕಾದ ನೂರುರೂಪಾಯಿ ಸಾಲ ಬಡ್ಡಿಗಳಿಂದ ಬಿಡುಗಡೆಹೊಂದಿ, ಆಧಾರವಾಗಿರುವ ಭೂಮಿ ಕಾಣಿ ಎಲ್ಲಾ ಒಂದು ಕಾಸೂ ಖರ್ಚಿಲ್ಲದೆ ಕೈಗೆ ಬಂದು ಬಿಡುತ್ತೆ ಅಂತ ಇನ್ನೂ ಏನೇನೋ ಲೆಕ್ಕಹಾಕಿಕೊಂಡಿದೆ. ಮತ್ತೆ ಬೇರೆ ಹೇಳುತ್ತೆ, ನಾಚಿಕೆ ಇಲ್ಲದೆ ನಾನು ಮಾವ, ನಾನು ಮಾವಾಂತ!"

ಕೊಂಚ ಸುಧಾರಿಸಿಕೊಂಡು ಆ 'ತೊಳೆದ ಕೆಂಡ'ವು ಮುಂದುವರಿಸಿತು. —"ಹೇಳಿಬಿಟ್ಟರೆ ನಿನ್ನ ಮನಸ್ಸಿಗೆ ಎಲ್ಲಿ ನೋವಾಗುತ್ತೋಂತ ನಾನಿದು ವರೆಗೂ ಹೇಳಲಿಲ್ಲ. ಈಗಲೂ ಹೇಳುತ್ತಿರಲಿಲ್ಲ. ಆದರೂ ಇವರ ಚಾಲು, ನಿಜಸ್ವರೂಪ ನಿನಗೂ ಗೊತ್ತಾಗಲೀಂತ ಹೇಳಲೇಬೇಕಾಯಿತು. ಅವತ್ತು, 'ಹುಡುಗೀಗೆ ಜ್ವರ ಏರುತ್ತಾ ಇದೆ. ಹೋಗಿ ಯಾರನ್ನಾದರೂ ಒಳ್ಳೆ ಡಾಕ್ಟ ರನ್ನ ಕರೆದುಕೊಂಡು ಬರಬಾರದೆ' ಅಂದದ್ದಕ್ಕೆ, 'ನನ್ನ ಹತ್ತಿರ ಅಷ್ಟೊಂದೇನು ದುಡ್ಡಿಲ್ಲ' ಅಂತ ಜವಾಬು. ಒಂದೇ ಒಂದು ಬಂಗಾರದ ಒಡವೆ – ನನ್ನ ಆಸ್ತಿ – ಮಾತ್ರ ಉಳಿದಿತ್ತು. ಅದನ್ನು ಗಿರವಿ ಇಟ್ಟು ನಾನೇ ಡಾಕ್ಟರನ್ನ ಕರೆಯಿಸಿ ಹುಡುಗಿಯನ್ನು ತೋರಿಸಿ ಔಷಧಿ ಕೊಡಿಸಿದೆ. ಹೀಗಿದ್ದರೂ ಕೂಡ ನಾಚಿಕೆ ಇಲ್ಲದೆ 'ನಾನು ಹುಡುಗಿಯ ಮಾವ, ನನಗೆ ಹೇಗೆ ಬೇಕೋ ಹಾಗೆ ಮಾಡಿಕೊಳ್ಳುತ್ತೇನೆ' ಅಂತ ಬೊಗಳುತ್ತಲ್ಲ. ಎಲ್ಲೋ ಯಮದೂತ! ನೀನೇಕೆ ಹೆದರಿಕೊಳ್ಳುತ್ತಿ ದುರ್ಗಾ? ನಾನಿರುವಾಗ ನಿನಗೇನು ಭಯ? ನಾನು ಇವತ್ತೇ ನಿನಗೆ ಹೊರಡುವುದಕ್ಕೆ ಅನುಕೂಲ ಮಾಡಿಕೊಡುತ್ತೇನೆ. ನೀನು ಊರಿಗೆ ಹೋಗಿ ನಿನಗೆ ಬೇಕಾದವನೊಡನೆ ಹುಡುಗಿಯ ಮದುವೆ ಮಾಡು. ಹುಡುಗಿಯ ಮದುವೆಯಾದಮೇಲೆ ನಿನಗೆ ಯಾವಾಗ ಬೇಕೂ ಅನ್ನಿಸಿದರೆ ಆಗ ಬಂದುಬಿಡು.

ದುರ್ಗಾದೇವಿಯು ಮೊದಲಿನಂತೆಯೇ ಕಂಭ ಒರಗಿಕೊಂಡು ಕುಳಿತಿದ್ದಳು. ಅವಳ ಕಣ್ಣುಗಳಿಂದ ನೀರಿನ ಧಾರೆಯು ಹರಿದು ಬಂತು.

ಕಂಠಸ್ವರವನ್ನು ಕೊಂಚ ಕಡಿಮೆಮಾಡಿಕೊಂಡು ಮರೆಯಲ್ಲಿರುವ ಗಂಡನನ್ನುದ್ದೇಶಿಸಿ ಭಾಮಿನಿಯು ಹೇಳಲುಪಕ್ರಮಿಸಿದಳು—"ಅನಾಥರು ಅಂತ ಗೊತ್ತಿದ್ದರೂ ಇವರ ಮೇಲೇಕೆ ಅತ್ಯಾಚಾರ ಮಾಡುತ್ತೀರಿ? ಮೇಲೆ ನೋಡುವ ಭಗವಂತನಿಲ್ಲವೇ? ನಾನು ಹೇಳುವುದನ್ನು ಕೇಳಿ. ಯಾವುದು ನಿಮ್ಮದೋ ಅವನ್ನ ಇಟ್ಟುಕೊಳ್ಳಿ—ಅದರಿಂದ ಹೊಟ್ಟೆ ತುಂಬಿಕೊಳ್ಳಿ. ಅದು ಬಿಟ್ಟು ಪರರ ಸ್ವತ್ತಿನಿಂದ ನಿಮ್ಮ ಹೊಟ್ಟೆ ತುಂಬಿಕೊಳ್ಳುವುದಕ್ಕೇಕೆ ಪ್ರಯತ್ನಿಸುತ್ತೀರಿ? ಹಾಗೆ ಮಾಡುವವರಿಗೆ ದೇವರಿಂದಿಗೂ ಒಳ್ಳೆಯದನ್ನು ಮಾಡುವುದಿಲ್ಲ."

ಆ ಮಧ್ಯಾಹ್ನವೇ ದುರ್ಗಾದೇವಿಯು ಪ್ರಯಾಣ ಸಿದ್ಧತೆಯಾಯಿತು.

ಗಾಡಿ ಹತ್ತುವ ಸಮಯದಲ್ಲಿ ದುರ್ಗಾದೇವಿಯು ಅದೇ ಆ 'ತೊಳೆದ ಕೆಂಡ'ದ ಕಾಲುಗಳನ್ನು ಕಣ್ಣೀರಿನಿಂದ ತೊಳೆದುಬಿಟ್ಟಳು. "ಅತ್ತಿಗೆ, ನೀನು ವಯಸ್ಸಿನಲ್ಲಿ ಚಿಕ್ಕವಳಾದರೂ ನಿನ್ನನ್ನು ನಾನು ಆಶೀರ್ವದಿಸಲಾರೆ. ಆದರೆ ಭಗವಂತನು ನಿನಗೆ ಇದಕ್ಕೆ ಪ್ರತಿಯಾಗಿ ಖಂಡಿತ ಒಳ್ಳೆಯದನ್ನು ಮಾಡುತ್ತಾನೆಂದು ಹೇಳುತ್ತೇನೆ. ನನಗಾಗಿ ನೀನು ನಿನ್ನ ಒಂದು ಒಡವೆಯನ್ನೂ ಕಳೆದುಕೊಂಡೆ."

ಯಥಾಸಹಜವಾಗಿ ಮೂವತ್ತೆರಡು ಹಲ್ಲುಗಳನ್ನು ಬಿಟ್ಟು ಊರಗಲ ಬಾಯಿ ತೆಗೆದು 'ತೊಳೆದ ಕೆಂಡ'ವು ನಕ್ಕಿತು. "ಒಡವೆ ಇಟ್ಟುಕೊಂಡು ನಾನೇನು ಮಾಡಬೇಕಾಗಿತ್ತು, ದುರ್ಗಾ? ಕೈಯಲ್ಲಿ ನಾಲ್ಕು ಬಳೆ, ಕತ್ತಿನಲ್ಲಿ ಮಂಗಳಸೂತ್ರ, ಎದುರಿಗೆ ಗಂಡುಮಕ್ಕಳನ್ನು ಇಟ್ಟುಕೊಂಡು ಗೋಬ್ರಾಹ್ಮಣರ ಸೇವೆಮಾಡುತ್ತಾ ಸಾಯುವಂತೆ ಪ್ರಾರ್ಥಿಸು. ಖಾಯಿಲೆಯ ದೇಹ ನಿಂತಿರುವುದು ಒಳ್ಳೆಯದಲ್ಲ. ಗಾಡಿ ಹತ್ತು. ಜನ್ನನು, ಮಗು ನಿಮ್ಮತ್ತೆ ಮಾವನ ಮನೆಯಲ್ಲಿ ನಿನಗೆ ಬಹಳ ಕಷ್ಟವಾಯಿತಮ್ಮ. ಆದರೂ ಬರುತ್ತಿರಬೇಕು. ಮರೆಯಬೇಡ ಕಂಡೆಯಾ?"

ಆಗ ಅವಳು ಬಲವಂತದಿಂದ ಜ್ಞಾನದಾ ಕೈಯಲ್ಲಿ ಎರಡು ರೂಪಾ ಯಿಟ್ಟಳು.

ಗಾಡಿ ಹೊರಡುತ್ತಿದ್ದ ಹಾಗೆಯೇ ಕಣ್ಣೊರೆಸಿಕೊಳ್ಳುತ್ತಾ ದುರ್ಗಾ ದೇವಿಯು, "ತಿಳುವಳಿಕೆ ಇಲ್ಲದೆ, ನಾನಿಲ್ಲಿ ಬಹಳ ಅಪರಾಧ ಮಾಡಿದ್ದೇನೆ, ಅತ್ತಿಗೆ, ಕ್ಷಮಿಸು, ಕ್ಷಮಿಸು!" ಎಂದು ಯಾಚಿಸಿದಳು.

'ತೊಳೆದ ಕೆಂಡ'ಕ್ಕೆ ಪೂರ್ಣ ನಗಲಾಗಲಿಲ್ಲ. ಕಣ್ಣಿಂದ ಹರಿಯು ತ್ತಿದ್ದ ಕಣ್ಣೀರನ್ನು ಜಾಗ್ರತೆ ಒರೆಸಿಕೊಂಡು, "ಸುಟ್ಟ ಅದೃಷ್ಟ! ಅಪರಾಧ ವೆಲ್ಲ ನಮ್ಮಿಂದ ಆಗಿದೆ ದುರ್ಗಾ! ಜ್ಞಾನು, ಮಗು, ಅತ್ತೆ ಮಾವನ ಮೇಲೆ ಕೋಪಮಾಡಿಕೊಳ್ಳಬೇಡಮ್ಮ, ಮುಂದಿನ ವರುಷ ಮಾವು, ಹಲಸುಗಳು ಫಲವಾಗುವ ಹೊತ್ತಿಗೆ ಬರಬೇಕು. ಗಂಡನನ್ನು ಕರೆದುಕೊಂಡು ಒಂದು ಸಲ ಖಂಡಿತ ಬರಬೇಕು, ಮಗು."

ಹಿಂಗೈಯಿಂದ ಮತ್ತೆರಡು ಕೊಟ್ಟ ನೀರನ್ನು ಭಾಮಿನಿಯು ಒರೆಸಿ ಕೊಂಡಳು.

೬

ಸಮಾಚಾರವನ್ನು ತಿಳಿಸಬೇಕಾದ ಅವಶ್ಯಕತೆ ಇಲ್ಲವೆಂದು ತಿಳಿದು, ಕಾಗದವನ್ನು ಬರೆಯದೆ ಇದ್ದಕ್ಕಿದ್ದ ಹಾಗೆಯೇ ದುರ್ಗಾದೇವಿಯು ತನ್ನೂರಿ ನಲ್ಲಿ ಬಂದಿಳಿದಳು. ಜ್ಞಾನದೆಯ ಈಗಿನ ಚಹರೆಯನ್ನು ನೋಡಿ ಅವಳ ದೊಡ್ಡಮ್ಮನು ಬಿದ್ದು ಬಿದ್ದು ನಕ್ಕಳು. "ಅಲ್ಲವೇ ಜ್ಞಾನು, ಇದೇನು ನಾಚಿಕೆ ಗೇಡೆ! ನಿನ್ನ ತಲೆಗೂದಲೆಲ್ಲ ಅದೇಕೆ ಉದುರಿಹೋಯಿತೆ? ಲೇ, ಇವಳೇ, ಇಲ್ಲಿ ಬಾ. ಇಲ್ಲಿ, ಬೇಗ. ನೋಡು ನಮ್ಮ ಜ್ಞಾನದಾ ಸುಂದರಿಯ ರೂಪವನ್ನು ಒಂದು ಸಲ ಕಣ್ಣಿಂದ ನೋಡಿ ಹೋಗು!— ನಿನ್ನ ಅತ್ತೆ ಮಾವ ಚೆನ್ನಾಗಿ ಬೇಯಿಸಿ ಬೇಯಿಸಿ ನಿನ್ನ ಚರ್ಮವನ್ನೆಲ್ಲಾ ಮಸಿ ಕಪ್ಪು ಮಾಡಿಬಿಟ್ಟರೇನೆ?"

ಜ್ಞಾನದೆಯು ಸುಮ್ಮನೆ ತಲೆತಗ್ಗಿಸಿ ಕುಳಿತಿದ್ದಳು. ಚಿಕ್ಕಮ್ಮನು ಬಂದೊಡನೆಯೇ ಅವಳು ಥಟ್ಟನೆದ್ದು ಕಾಲಿಗೆರಗಿದಳು.

ಚಿಕ್ಕಮ್ಮನು ಹುಡುಗಿಯನ್ನು ನೋಡಿ ನಡುಗಿಬಿಟ್ಟಳು. "ಅಯ್ಯೋ ಇದ್ಯಾಕೆ ಮಗು, ಹೀಗಾಗಿಬಿಟ್ಟಿದೀಯೆ?"

"ಮರಗಳಮೇಲೆ ವಾಸಿಸುವ ದೆವ್ವವಾಗಿಬಿಟ್ಟಿದ್ದಾಳೆ. ರಾತ್ರಿ ಕತ್ತಲಲ್ಲಿ ಯಾರಾದರೂ ನೋಡಿದರೆ ಹೆದರಿಬಿಡುತ್ತಾರೆ ಅಷ್ಟೆ." ಎಂದಳು ದೊಡ್ಡಮ್ಮ. ವಾಸ್ತವವಾಗಿಯೂ ಅದೇನು ಅತಿಶಯೋಕ್ತಿಯಲ್ಲ.

ದೊಡ್ಡಮ್ಮ ಕಿಲಕಿಲನೆ ನಕ್ಕಳು. ಆದರೆ ಇಂದು ಚಿಕ್ಕಮ್ಮನುಮಾತ್ರ ಅಕ್ಕನೊಡನೆ ಒಂದುಗೂಡುವ ಮನಸ್ಸುಳ್ಳವಳಾಗಲಿಲ್ಲ. ಅವಳು ಎಂತಹವಳಾದರೇನು ಮಕ್ಕಳನ್ನು ಹೆತ್ತ ತಾಯಿಯಲ್ಲವೇ! ಹುಡುಗಿಯ ಈ ಭಯಂಕರವಾದ ರಕ್ತಹೀನ ಮುಖವನ್ನು ನೋಡಿ ಚಿಕ್ಕಮ್ಮನ ಮಾತೃಹೃದಯವು ನೂರು ಹೋಳುಗಳಾದವು.

ಅವಳು ಜ್ಞಾನದಾ ಬಳಿ ಕುಳಿತು ಸ್ನೇಹದಿಂದ ತಲೆಗೂದಲನ್ನು ನೇವರಿಸಿ ಮೃದುವಾಗಿ ಕೈಯಾಡಿಸಿದಳು. ಜ್ಞಾನದಾ ಬಾಯಿಂದ ರೋಗದ ಸಮಸ್ತ ವಿಚಾರಗಳನ್ನು ಕೇಳಿ ಒಂದು ದೀರ್ಘ ಶ್ವಾಸವೆಳೆದು, "ಹಾಗಿದ್ದರೆ ನೀನು ಆಕ್ಷಣವೇ ಬಂದುಬಿಡಲಿಲ್ಲವೇಕೆ ಮಗು? ಬರಕೂಡದೆಂದು ನಾನೇನು ತಡೆಮಾಡಿರಲಿಲ್ಲವಲ್ಲ. ದುರ್ಗ ಕ್ಕೆಲ್ಲಿ?" ಎಂದಳು.

"ಅಮ್ಮನಿಗೆ ದಾರಿಯಲ್ಲಿಯೇ ಜ್ವರ ಏರಿಬಿಟ್ಟಿತು. ಅವಳನ್ನು ಕೊಠಡಿಯಲ್ಲಿ ಮಲಗಿಸಿ ಬಂದಿದ್ದೇನೆ ಚಿಕ್ಕಮ್ಮ."

ಇದನ್ನು ಕೇಳಿ ಸ್ವರ್ಣಮಂಜರಿಯು ಹೇಳಿದಳು—"ಇಂತಹ ದೆಶೆ ಬರದೆ ಇರುತ್ತೇನು? ಸಾವಿರವಾಗಲಿ – ನಾನು ಎಷ್ಟಾದರೂ ದೊಡ್ಡವಳು— ಹಿರಿಯಕ್ಕ! ಅಷ್ಟೊಂದು ಘೋರಣೆಮಾಡಿಕೊಂಡು ಹೋದರೆ ದೇವರು ಸಹಿಸುತ್ತಾನೆಯೆ?"

ಚಿಕ್ಕಮ್ಮನು ಜ್ಞಾನದಾ ಕೈಹಿಡಿದುಕೊಂಡು ಅವಳ ತಾಯಿಯನ್ನು ನೋಡಲು ಎದ್ದುನಿಂತಳು. ಹಿರಿಯಕ್ಕನ ಬಾಯಿಂದ ಹೊರಬಿದ್ದ ಈ ಕಟುವಚನ ಅವಳಿಗೆ ಬಹಳ ಕೆಡಕೆನಿಸಿತು. ಅವಳಿಂದ ಸಹಿಸಲಾಗಲಿಲ್ಲ. "ಅಕ್ಕ, ಒಂದೆರಡು ವರುಷ ಮಧುಸಂಕ್ರಾಂತಿ ವ್ರತಮಾಡು. ಮುಂದಿನ ಜನ್ಮದಲ್ಲಿಯಾದರೂ ಒಳ್ಳೆಯ ಮಾತನಾಡುವುದು ಬರಲಿ" ಎಂದಳು.

ಸ್ವರ್ಣಮಂಜರಿಗೆ ಇಂತಹ ಮನಸ್ಸು ಕಡೆಯುವ ಮಾತನ್ನು ಕೇಳುವೆನೆಂದು ಲೇಶಮಾತ್ರವೂ ಅನ್ನಿಸಿರಲಿಲ್ಲ. ಕೋಪ ಮತ್ತು ಆಶ್ಚರ್ಯದಿಂದ

ಅವಾಕ್ಕಾದಳು. ನಂತರವೇ ತೀವ್ರ ಸ್ವರದಲ್ಲಿ, "ಇನ್ನೂ ಬೇಕಾದಷ್ಟು ಇದೆ ಕಣೆ ಬೇಕಾದಷ್ಟಿದೆ. ನನಗೆ ಗೊತ್ತು. ಅಲ್ಲ ಇಷ್ಟು ದಿನಗಳಮೇಲೆ, ನಿಮ್ಮ ದುರ್ಗಕ್ಕನನ್ನು ನೋಡಿ ಅವಳ ದುಃಖ ಅದು ಹೇಗೆ ನಿನ್ನಲ್ಲೂ ಹಾರಿಬಂದು ಆಕ್ರಮಿಸಿತೋ—ನಿನ್ನ ಹೃದಯವನ್ನು ಕದಿಸಿತೋ ನಾನು ಬೇರೆ ಕಾಣೆ. ರಾಮ ರಾಮ! ಅದೆಷ್ಟು ಆಟ ಹೂಡುವುದನ್ನು ಕಲಿತಿದ್ದೀಯೆ? ಅಬ್ಬ!" ಎಂದಳು.

ಅವಳು ಯಾವ ಪ್ರತ್ಯುತ್ತರವನ್ನೂ ಕೊಡಲಿಲ್ಲ. ಜ್ಞಾನದಾ ಕೈ ಹಿಡಿದುಕೊಂಡು ಒಳಕ್ಕೆ ಕರೆದುಕೊಂಡು ಹೊರಟುಹೋದಳು. ಆದರೆ ಚಿಕ್ಕಮ್ಮನೊಡನೆ ಸಲಿಗೆಯಿಂದ ಅಲ್ಲಿಗೆ ಹೋಗುವುದಕ್ಕೆ ಜ್ಞಾನದೆಗೆ ಭಯ ವಾಯಿತು. ಏಕೆಂದರೆ ಸ್ವರ್ಣಮಂಜರಿಗೆ ಜ್ಞಾನದಾ ಹಾಗು ಅವಳತಾಯಿಯ ಮೇಲೆ ಮಿತಿ ಇಲ್ಲದ ವಿದ್ವೇಷವಿತ್ತು. ಆದಕ್ಕೆ ಚಿಕ್ಕಮ್ಮನ ಈ ಸಹಾನು ಭೂತಿಯಿಂದ ಇನ್ನೇನು ಕೆಡಕಾಗುವುದೋ ಎಂದು ಭಯಭೀತಳಾದಳು.

ಹರಿಪಾಲಪುರದಲ್ಲಿರುವಾಗ ದುರ್ಗಾದೇವಿಯು ಜ್ವರ ಬಂದಾಗ ಮಲ ಗಿರುತ್ತಿದ್ದಳು. ಬಿಟ್ಟಾಗ ಎದ್ದು ಓಡಾಡಿಕೊಂಡಿರುತ್ತಿದ್ದಳು. ಸಾಧ್ಯವಾದರೆ ಸ್ನಾನ ಪೂಜೆಮಾಡಿಕೊಂಡು ಒಂದು ಹೊತ್ತು ತಾನೇ ಅಡಿಗೆಮಾಡಿಕೊಂಡು ಊಟಮಾಡುತ್ತಲೂ ಇದ್ದಳು. ಆದರೆ ಇಲ್ಲಿಗೆ ಬಂದಮೇಲೆ ವಿಚಾರವೇ ಬೇರೆಯಾಗಿಹೋಯಿತು. ನೆರೆಹೊರೆಯವರು ಆವಳಮೇಲೆ ಸಹಾನುಭೂ ತಿಯ ಹೊಳೆಯನ್ನು ಹರಿಸಿ ಆವಳನ್ನು ಒಂದೇ ಸಲ ಸಂಪೂರ್ಣವಾಗಿ ಹಾಸಿಗೆ ಹಿಡಿಯುವ ಹಾಗೆಯೇ ಮಾಡಿಬಿಟ್ಟರು.

ನೀಲಕಂಠ ಮುಖರ್ಜಿಯ ಹೆಂಡತಿಯು ದುರ್ಗಾದೇವಿಯನ್ನು ನೋಡಲು ಒಂದೇಸಲ ಆಕಾಶದಿಂದ ಹಾರಿಬಂದಳು. "ಇದೇನೆ ದುರ್ಗಾ, ಹೀಗೆಮಾಡಿ ಬಿಟ್ಟೆ—ಮಗಳ ಮದುವೆ ಯಾವಾಗಮಾಡುತ್ತಿ? ಹುಡುಗಿ ಎಷ್ಟು ಬೆಳೆದು ಬಿಟ್ಟಿದ್ದಾಳೆ—ನೋಡುವುದಕ್ಕೆ ಸಾಧ್ಯವಿಲ್ಲವೇ."

ದುರ್ಗಾದೇವಿಯು ಆಯಾಸಗೊಂಡ ಕಣ್ಣುಗಳನ್ನು ಮುಚ್ಚಿಕೊಂಡು ಕ್ಷೀಣ ಸ್ವರದಲ್ಲಿ, "ಏನು ಗೊತ್ತು ಹೇಳಿಯಮ್ಮ. ಯಾವಾಗ ಭಗವಂತನ ಕೃಪಾದೃಷ್ಟಿಯು ಬೀಳುತ್ತದೆಯೋ!" ಎಂದಳು.

"ಅದೇನೋ ಗೊತ್ತು ! ಪ್ರಯತ್ನವಂತೂ ಮಾಡಲೇಬೇಕಲ್ಲ. ಭಗವಂತ ತಾನೇ ಬಂದು ಹುಡುಗನನ್ನು ಮುಂದೆ ತಂದು ನಿಲ್ಲಿಸುತ್ತಾನೇನು ?"

ದುರ್ಗಾದೇವಿಯು ಉತ್ತರವೇನನ್ನೂ ಕೊಡಲಿಲ್ಲ.

ಕೊಂಚ ಹೊತ್ತು ಉತ್ತರದ ನಿರೀಕ್ಷಣೆಯಿಂದಿದ್ದ ಆಕೆಯು, "ಅದು ಸರಿ, ತವರುಮನೆಗೆ ಹೋಗಿದ್ದೆಯಲ್ಲ. ನಿಮ್ಮಣ್ಣ ಯಾವುದನ್ನೂ ಹುಡುಕಲಿಲ್ಲವೇ ? ಇಲ್ಲಿ ನಿನ್ನ ಮೈದುನನೇನು ಹೇಳುತ್ತಾನೆ ?" ಎಂದಳು.

"ದೇವರೇ ಬಲ್ಲ !" ದುರ್ಗಾದೇವಿಯು ಪಕ್ಕಕ್ಕೆ ತಿರುಗಿ ಮಲಗಿದಳು.

ಮತ್ತೊಂದು ಗಂಟೆಯು ಕಳೆದವೇಲೆ ಆದರಿಣಿಯು ಬಂದಳು. ಅವಳೂ ದೂರದ ಸಂಬಂಧಿಯೇ. ಅವಳು ಬಾಗಿಲಿನ ಹೊರಗೇ ನಿಂತು ಒಳಗೆ ಇಣಿಕಿ, "ಈಗ ಹೇಗಿದೆಯೆ, ದುರ್ಗಾ ?" ಎಂದು ಕೇಳಿದಳು.

ಜ್ಞಾನದಾ ಒಂದು ಕೊನೆಯಲ್ಲಿ ಕುಳಿತು ತಾಯಿಯ ಪಾದಗಳನ್ನು ಒತ್ತುತ್ತಿದ್ದಳು. "ಜ್ವರ ಇನ್ನೂ ಬಿಟ್ಟಿಲ್ಲ" ಎಂದು ಅವಳೇ ಉತ್ತರ ಹೇಳಿದಳು.

ದುರ್ಗಾದೇವಿಯು ಹೊರಳಿ ಬಂದಾಕೆಯನ್ನು ನೋಡಿ, "ಬಾ, ಕುಳಿತುಕೋ" ಎಂದಳು.

"ಇಲ್ಲವ್ಮ, ಬಹಳ ಹೊತ್ತಾಗಿಹೋಗಿದೆ. ಈಗ ಕುಳಿತುಕೊಳ್ಳುವುದಿಲ್ಲ. ಜ್ಞಾನು ಮದುವೆ ಆದಷ್ಟು ಜಾಗ್ರತೆ ಮಾಡಿಬಿಡು. ಯಾರಾದರೂ ಸಿಕ್ಕಿದರೆ ಸಾಕು ಮದುವೆಮಾಡಿಬಿಡು. ಅಂತಹವರು, ಇಂತಹವರು ಅಂತೆ ಸುಮ್ಮನೆ ಹೆಚ್ಚಾಗಿ ನೋಡುತ್ತಲೂ ಹೋಗಬೇಡ. ಕಾಲ ಚೆನ್ನಾಗಿಲ್ಲ. ನಾವು ಇದೆಲ್ಲ ಹೇಳಬಾರದು. ಆದರೆ ಕಂಡೂ ಕಂಡೂ ಹೇಳದೆ ಇರುವಹಾಗೂ ಇಲ್ಲ. ಮೊದಲು ಹುಡುಗಿ ನೋಡುವುದಕ್ಕೆ ಮೈ ಕೈ ತುಂಬಿಕೊಂಡು ಕೊಂಚ ಚೆನ್ನಾಗಿಯೇ ಕಾಣಿಸುತ್ತಿದ್ದಳು. ಈಗ ಮಲೇರಿಯಾ ಜ್ವರದಿಂದ ಮೈಬಣ್ಣ ಕೋಗಿಲೆಯ ಹಾಗಾಗಿದೆ. ಅಲ್ಲವೇ ಜ್ಞಾನದಾ, ಮುಂದಿನ ಕೂದಲು ಜ್ವರದಲ್ಲೇ ಬಿದ್ದುಹೋದದ್ದು ?"

ಸುಮ್ಮನೆ ತಲೆಹಾಕಿ ಆ ಬಡಪಾಯಿಯು ತಲೆತಗ್ಗಿಸಿತು. ಆದರಿಣಿಯು ಉದ್ದಿಶ್ಯಪೂರ್ವಕವಾಗಿ ಧ್ವನಿಯನ್ನು ಕೋಮಲಮಾಡಿಕೊಂಡು, "ಅಲ್ಲವೇ

ದುರ್ಗೆ, ಆ ಬೀದಿ ಗೋಪಾಲಭಟ್ಟಾಚಾರ್ಯರ ಮತ್ತೆ ಮದುವೆಮಾಡಿಕೊಳ್ಳು ತ್ತಾರಂತೆ. ಒಂದು ಸಲ ನಿನ್ನ ಮೈದುನನನ್ನ ಕಳುಹಿಸಿಕೊಡಬಾರದೆ?" ಎಂದಳು.

"ಕೇಳುತ್ತೇನೆ." ಎಂದು ದುರ್ಗಾದೇವಿಯು ಒಂದು ನಿಟ್ಟುಸಿರುಬಿಟ್ಟು ಗೋಡೆಯಕಡೆ ಮುಖ ತಿರುಗಿಸಿಕೊಂಡು ಮಲಗಿದ್ದಳು.

ಹೀಗೆಯೇ ಎಷ್ಟೋಜನ ಬಂದು ಎಷ್ಟೋ ಬಗೆಗಳಲ್ಲಿ ಉಪದೇಶಮಾಡಿ ಹೋದರು. ಆದರೆ ದುರ್ಗಾದೇವಿಯು ಯಾರ ದಾರಿಯನ್ನು ಪ್ರತಿಕ್ಷಣವೂ ಇದಿರುನೋಡುತ್ತಿದ್ದಳೋ ಅವರಲ್ಲಿ ಯಾರೊಬ್ಬರೂ ದರ್ಶನ ಕೊಡಲಿಲ್ಲ. ಅತುಲನಾದರೂ ಒಮ್ಮೆ ಬರಲಿಲ್ಲ; ಅವನ ತಾಯಿಯು ಮೊದಲೇ ಬರಲಿಲ್ಲ.

ಕಿರಿಯ ಸೊಸೆಯ ಹೃದಯದಲ್ಲಿ ದಯಾಮಮತೆಗಳ ಅಭಾವವೇನೂ ಇರಲಿಲ್ಲ. ಆದರೆ ಅವಳು ಬಹಳ ಆಲಸೀಪ್ರಕೃತಿಯವಳು. ಅದರಮೇಲೆ ಅವಳು ಈಗ ಪೂರ್ಣ ಗರ್ಭಿಣಿ. ಆದರಿಂದ ಸ್ವರ್ಣಮಂಜರಿಯು ಜ್ಞಾನದೆ ಯನ್ನು ಕರೆದು, "ನೋಡು, ರೋಗದ ನೆಪಹೇಳಿಕೊಂಡು ಹೀಗೆಯೇ ಯಾವಾ ಗಲೂ ತಳ್ಳುವಹಾಗಿಲ್ಲ. ನಿಮ್ಮಮ್ಮ ಈಗಿನ ಖಾಯಿಲೆಯ ಸ್ಥಿತಿಯಲ್ಲಿ ಏನೂ ಮಾಡಲಾರಳೆಂಬುದನ್ನು ಒಪ್ಪಿಕೊಂಡೆ. ಆದರೆ ನೀನೇನು ಇನ್ನೂ ಹುಡುಗಿ ಯಲ್ಲ. ಬೆಳೆದ ಹೆಂಗಸಾಗಿದ್ದೀಯೆ. ಬೆಳಗ್ಗೆ ಅಷ್ಟುಹೊತ್ತಿಗೆ ಎದ್ದು ನಿಮ್ಮ ಚಿಕ್ಕಪ್ಪನಿಗೆ ಒಂದಿಷ್ಟು ಅಡಿಗೆಮಾಡಲಾರೆಯಾ?" ಎಂದಳು.

ಕೊಠಡಿಯೊಳಗೆ ಮಲಗಿದ್ದ ಕಿರಿಯ ಸೊಸೆಗೆ ಇದು ಕೇಳಿಸಿತು. ಅನ್ಯಾಯವೆನ್ನಿಸಿತು. ಪರರ ದುಃಖವನ್ನು ನೋಡಿ ಅವಳು ವ್ಯಥೆಪಡುವಳು. ಆದರೆ ಸ್ವತಃ ಪರಿಶ್ರಮಪಟ್ಟು ಪರರ ದುಃಖ ದೂರುಮಾಡುವುದಾಗಲಿ, ದುಃಖಿಗಳಿಗೆ ಸಹಾಯ ನೀಡುವುದಾಗಲಿ ಅವಳಿಂದ ಸಾಧ್ಯವಾಗುತ್ತಿರಲಿಲ್ಲ.

ಜ್ಞಾನದಾ ಒಡನೆಯೇ ಒಪ್ಪಿಕೊಂಡಳು. "ನಾನೇ ಮಾಡುತ್ತೇನೆ ದೊಡ್ಡಮ್ಮ. ಆಗಲಿ."

ಅವಳಿಗೆ ಪ್ರತಿನಿತ್ಯ ರಾತ್ರಿಯಹೊತ್ತು ಜ್ವರ ಬರುತ್ತಿದ್ದರೂ ಸಹ ತಾಯಿಯ ಮಾನಸಿಕ ಕ್ಲೇಶವು ಹೆಚ್ಚಿಬಿಡುವುದೆಂಬ ಭಯದಿಂದ ಖಾಯಿಲೆ ಯನ್ನು ಮುಚ್ಚಿಡುತ್ತ ಬಂದಳು. ಒಣಗಿದ ಸತ್ವಹೀನ ದೇಹವನ್ನು ಅವಳು

ಪ್ರತಿನಿತ್ಯ ಬೆಳಗ್ಗೆ ಅಷ್ಟುಹೊತ್ತಿಗೆ ಬಲವಂತದಿಂದ ಹಾಸಿಗೆಯಿಂದ ಮೇಲಕ್ಕೆ ತ್ತುತ್ತಿದ್ದಳು—ವಾಸ್ತವವಾಗಿಯೂ ಅವಳಲ್ಲಿ ಚೈತನ್ಯವಿರಲಿಲ್ಲ. ಆದರೂ ಅವಳು ಒಂದುಸಲವಾದರೂ ಹಿಂಜರಿಯಲಿಲ್ಲ; ಒಂದುಸಲವಾದರೂ ಊಡಿಸಿ ಕೊಳ್ಳಲಿಲ್ಲ.

ದುಃಖಿತ ತಾಯಿತಂದೆಗಳ ಹೊಟ್ಟೆಯಲ್ಲಿ ಹುಟ್ಟಿದ್ದರೂ ಸಹ ಜ್ಞಾನದಾ ಅವರ ಏಕಮಾತ್ರ ಪುತ್ರಿಯಾದ್ದರಿಂದ ಅವಳನ್ನು ಅತ್ಯಂತ ಪ್ರೀತ್ಯಾದರ ಗಳಿಂದ ಲಾಲಿಸಿ ಪಾಲಿಸಿದ್ದರು. ಆದರೂ ತೀರ ಚಿಕ್ಕಂದಿನಿಂದಲೂ ಅವಳು ದೊಡ್ಡವರ ಆಜ್ಞೆಯನ್ನು—ಉಚಿತವೆ, ಅನುಚಿತವೆ ಎಂದು ಯೋಚಿಸದೆ— ಪಾಲಿಸುತ್ತಿದ್ದಳು; ಅವರ ಸೇವೆಮಾಡುತ್ತಿದ್ದಳು. ಬಾಯಿಮುಚ್ಚಿಕೊಂಡು ಮೂಕ ಹಸುವಿನಂತೆ ಎಲ್ಲವನ್ನೂ ವಹಿಸುತ್ತಿದ್ದಳು. ಈ ಗುರುಹಿರಿಯರ ಭಕ್ತಿ, ಮತ್ತು ಸಹನೆಯಲ್ಲಿ ಇಂತಹ ಇನ್ನೊಬ್ಬ ಹೆಣ್ಣುಮಗಳು ಈ ಪ್ರಪಂಚ ದಲ್ಲಿ ಸಿಕ್ಕುವುದು ದುರ್ಲಭ.

ಆದರೆ ಇಂದು ಅವಳು ಶಿರಸಾವಹಿಸಿದ ಜವಾಬ್ದಾರಿಯು ಎಷ್ಟು ಗಡು ತರವಾದದ್ದು, ಎಷ್ಟು ಕಷ್ಟವಾದದ್ದು ಎಂಬುದು ಕಿರಿಯ ಸೊಸೆಗೊಬ್ಬಳಿಗೆ ಗೊತ್ತಾಗಿರುವುದು. ಬೇರೆ ಯಾರಿಗೂ ಇಲ್ಲ.

ಹಿರಿಯ ವಾರಗಿತ್ತಿಯ ಈ ಆಜ್ಞೆಯನ್ನು ಕೇಳಿ ಕಿರಿಯವಳು ಒಳಗೇ ಬೆಂಕಿ ಬೆಂಕಿಯಾದಳು. ಆದರೂ ಸಹ ಬಾಯಿಬಿಟ್ಟು ಅದನ್ನು ತಡೆಗಟ್ಟುವ ಸಾಹಸವನ್ನು ಮಾಡಲು ಅವಳಿಂದ ಸಾಧ್ಯವಾಗಲಿಲ್ಲ. ಈ ವಿಚಾರದಲ್ಲಿ ಏನಾದರೂ ಹೇಳುವುದಕ್ಕೆ ಹೋದದ್ದೆ ಆದರೆ ಆ ಕೆಲಸ—ಅಂದರೆ ಬೆಳಗ್ಗೆ ಅಷ್ಟು ಹೊತ್ತಿಗೆ ಎದ್ದು ಅಡಿಗೆ ಮಾಡುವುದು ತನಗೆ ಅಂಟಿಬಿಡುವುದೆಂದು ಹೆದರಿ ಸುಮ್ಮನಿದ್ದು ಬಿಟ್ಟಳು.

ಮಾರನೆಯ ದಿನ ಯಥಾಸಮಯದಲ್ಲಿ, ಸ್ನಾನಮಾಡಿದ ಚಿಕ್ಕಪ್ಪನು ಒಳಕ್ಕೆ ಹೋಗುತ್ತಿರುವುದನ್ನು ನೋಡಿ ಜ್ಞಾನದಾ ತಟ್ಟೆಯಲ್ಲಿ ಎಲ್ಲವನ್ನೂ ಬಡಿಸಿಕೊಂಡು ಮುಂದಿಡಲು ತೆಗೆದುಕೊಂಡು ಹೋಗುತ್ತಿರುವಷ್ಟರಲ್ಲಿಯೇ ಅವಳ ದೊಡ್ಡಮ್ಮನು, "ಹಾ, ಹಾ," ಎಂದು ತಡೆದು ರಭಸದಿಂದ ಬಂದು "ಎಲ್ಲಿಗೆ ಹೋಗುತ್ತಿದ್ದೀಯೆ ?" ಎಂದು ಕೇಳಿದಳು.

"ಚಿಕ್ಕಪ್ಪ ಸ್ನಾನಮಾಡಿಕೊಂಡು ಬಂದಿದ್ದಾರೆ" ಎಂದು ಪಿಟಿಪಿಟಿ ಎಂದಳು.

"ಅದಕ್ಕೆ ನಿನಗೇನು? ನಾನು ನಿನಗೆ ತಟ್ಟೆಗೆ ಬಡಿಸಿಕೊಂಡು ತೆಗೆದು ಕೊಂಡು ಹೋಗಬೇಡನೆಂದು ಅಪ್ಪಣೆ ಮಾಡಿರಲಿಲ್ಲವೇ? ನಿನ್ನ ಕೈಯಿಂದ ಬಡಿಸಲ್ಪಟ್ಟ ಊಟವನ್ನು ಗಂಡಸರು ಊಟಮಾಡುತ್ತಾರೇನು?" ಎಂದು ಕಿರಚಿಡಳು.

ದುರ್ಗಾದೇವಿಯು ಹಾಗೆಯೇ ಎದ್ದು ತನ್ನ ಕೊಠಡಿಯ ಬಾಗಿಲ ಬಳಿ ಬಂದು ಕುಳಿತಿದ್ದಳು. ಈ ಕೂಗಾಟವನ್ನು ಕೇಳಿ ಹೆದರಿಕೆಯಿಂದ ಅವಾಕ್ಕಾಗಿ ನೆಟ್ಟದೃಷ್ಟಿಯಲ್ಲಿಯೇ ಈಕ್ಷಿಸುತ್ತಿದ್ದಳು.

ಕಿರಿಯ ಸೊಸೆಯು ಕೊಠಡಿಯಿಂದ ಹೊರಕ್ಕೆ ಬಂದು, "ಏನಾಯಿ ತಕ್ಕ? ಹೀಗೇಕೆ ಕಿರಿಚುತ್ತಿ?" ಎಂದಳು.

ಸ್ವರ್ಣಮಂಜರಿಯು ಮತ್ಯಾರ ಕಡೆಯೂ ಕಣ್ಣು ಹೊರಳಿಸದೆ, ಆ ವಾಕ್ಯ ಹೀನ, ಜಡಸದೃಶ, ನಿಶ್ಚಲ ಹೆಣ್ಣನ್ನು ಉದ್ದೇಶಿಸಿ, "ಕೈಯಿಂದ ಬಡಿಸಿ ಕೊಂಡು ತೆಗೆದುಕೊಂಡು ಹೋಗಿ ಮುಂದಿಟ್ಟರೆ ನಿನ್ನ ಚಿಕ್ಕಪ್ಪ ಸಂತೋಷ ಗೊಂಡು ನಿನ್ನನ್ನು ಕೂಡಿಸಿಕೊಂಡು ಯಾರನ್ನಾದರೂ ಒಬ್ಬ ರಾಜಕುಮಾರ ನನ್ನು ತಂದು ನಿನ್ನೊಡನೆ ಮದುವೆಮಾಡುತ್ತಾನೇನು?—ಏನೇ ಮೂಳಿ! ಅಬ್ಬಬ್ಬ, ಈ ವಯಸ್ಸಿನಲ್ಲಿಯೇ ಮನಸ್ಸನ್ನು ವಶಮಾಡಿಕೊಳ್ಳುವುದನ್ನು ಚೆನ್ನಾಗಿ ಕಲಿತಿದ್ದೀಯೆ ಪರವಾಗಿಲ್ಲ!" ಎಂದು ಆ ಹುಡುಗಿಯ ಕೈಯಲ್ಲಿದ್ದ ಬಡಿಸಿದ ತಟ್ಟೆಯನ್ನು ಕಿತ್ತುಕೊಂಡು ಹೋದಳು.

ದುರ್ಗಾದೇವಿಯು ಪ್ರತಿನಿತ್ಯ ಸಾವಿರಾರು ತರಹ ಜ್ವಾಲೆಯಿಂದ ಬೆಂದು ಬೆಂದು ಕ್ರಮೇಣ ಅಸಹಿಷ್ಣುವಾಗುತ್ತ ಬಂದಿದ್ದಳು. "ಕರಿಮುಸಡಿಯವಳೆ, ಸುಟ್ಟಮೋರೆಯವಳೆ, ದೊಡ್ಡವರು, ಹಿರಿಯರು ಹೇಳಿದ ಮಾತನ್ನು ನೀನು ಕೇಳದ ಮೇಲೆ ನಿನಗೆ ಸಾವಾದರೂ ಬರಬಾರದೆ!" ಈ ಮಾತುಗಳನ್ನಾಡಿ ದರೂ ಅವಳ ಕಣ್ಣಲ್ಲಿ ನೀರು ಮಾತ್ರ ಹರಿಯುತ್ತಿತ್ತು.

ತಾಯಿಯು ಹಾಗೆ ಅಂದರೂ ಯಾವ ಸಮಾಧಾನವನ್ನೂ ಕೊಡದೆ ಆ ಹೆಣ್ಣುಮಗಳು ಅಡಿಗೆಯ ಮನೆಯೊಳಕ್ಕೆ ಹೊರಟುಹೋದಳು.

ಈ ಅತ್ಯಾಚಾರದ ಪ್ರತಿವಾದಮಾಡುವ ಶಕ್ತಿ ಇರುವುದು ಕಿರಿಯಸೊಸೆಗೊಬ್ಬಳಿಗೆ ಮಾತ್ರ. ಆದರೆ ಅವಳಿಗೆ ಆ ಕರ್ಕಶಸ್ವರೂಪಿ ಹಿರಿ ವಾರಗಿತ್ತಿಯ ಸ್ವಭಾವ ಚೆನ್ನಾಗಿ ಗೊತ್ತು. ಆದರಿಂದ ಪ್ರತಿವಾದಿಸದೆ ಸುಮ್ಮನಿದ್ದುಬಿಟ್ಟಳು. ಸ್ವರ್ಣಮಂಜರಿಯು ಜಗಳ ಸ್ವಭಾವದವಳು. ಅಂತೆಯೇ ಆತ್ಮಮರ್ಯಾದೆ ಇಲ್ಲದವಳೂ ಆಗಿದ್ದಳು. ಅವಳ ಕಣ್ಣೆದುರಿಗೇ, ಅವಳ ಸಾವಿರ ತಪ್ಪುಗಳನ್ನು, ದೋಷಗಳನ್ನು ಎತ್ತಿತೋರಿಸಿದರೂ ಅವಳು ಲಜ್ಜಿತಳಾಗುತ್ತಿರಲಿಲ್ಲ. ಆದರಿಂದ ಅವಳು ಹೆಚ್ಚು ನಿಷ್ಠುರಳಾಗುತ್ತಿದ್ದಳು. ಇಷ್ಟೆ. ಇದು ಕಿರಿಯವಳಿಗೆ ಚೆನ್ನಾಗಿ ಗೊತ್ತು. ಆದಕ್ಕೆ ಅವಳು ಸುಮ್ಮನೆ ಜ್ಞಾನದೆಯ ಹಿಂದೆ ಹಿಂದೆಯೇ ಅಡಿಗೆಮನೆಯೊಳಗೆ ಬಂದು ಸ್ನೇಹಾದರಗಳಿಂದ ಅವಳ ಕೈಹಿಡಿದು, "ಅಕ್ಕ ಹೇಳಿದ ಮಾತನ್ನೇಕೆ ಕೇಳಲಿಲ್ಲ ಮಗು?" ಎಂದು ಕೇಳಿದಳು.

ಇದುವರೆಗೂ ಬೇಕಾದಷ್ಟು ಅಪಮಾನ, ತಿರಸ್ಕಾರಗಳನ್ನು ಜ್ಞಾನದಾ ಸಹಿಸುತ್ತ ಬಂದಿದ್ದಳು. ಆದರೆ ಈಗ ತಪ್ಪು ಹೊರೆಸುಪಿಕೆಯ ಸ್ನೇಹದ ಈ ರೂಪವನ್ನು ಅವಳಿಂದ ಸಹಿಸದಾಗಲಿಲ್ಲ. ಒಂದು ಸಲ ಕಣ್ಣೆತ್ತಿ ಚಿಕ್ಕಮ್ಮನನ್ನು ನೋಡಿದುದೇ ತಡ ಬುಡ ಮುರಿದ ಮರದಂತೆ ದೊಪ್ಪನೆ ಚಿಕ್ಕಮ್ಮನ ಕಾಲುಗಳ ಮೇಲೆ ಬಿದ್ದುಬಿಟ್ಟಳು. "ನನಗೆ ಬೇಡವೆಂದು ಯಾರೂ ಹೇಳಿರಲಿಲ್ಲ ಚಿಕ್ಕಮ್ಮಾ!'' ಎಂದು ಜ್ಞಾನದೆಯು ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಚಿಕ್ಕಮ್ಮನು ಹತ್ತಿರ ಕುಳಿತು ಹುಡುಗಿಯ ಕಣ್ಣೀರೇನೋ ಒರೆಸಿದಳು. ಆದರೆ ಏನು ಹೇಳಿ ಆ ಹುಡುಗಿಗೆ ಧೈರ್ಯಹುಟ್ಟಿಸಲಿ, ಸಂತಯಿಸಲಿ ಎಂಬುದು ಅವಳ ಬುದ್ಧಿಗೆ ಗೋಚರಿಸಲಿಲ್ಲ.

ಈ ರೀತಿಯಲ್ಲಿ ಆ ಭಾಗ್ಯಹೀನೆ, ಅವಿವಾಹಿತೆಯು ದಿನಗಳನ್ನು ತಳ್ಳತೊಡಗಿದಳು. ಮನೆಯಲ್ಲಿ, ಹೊರಗೆ, ತನ್ನವರು, ಪರರು, ಎಲ್ಲರೂ ಯಾವಾಗಲೂ ಅವಳನ್ನು, ಅಂದು ಆಡುವುದಕ್ಕೆ ಬದ್ಧಕಂಕಣರಾಗಿ ಬಿಟ್ಟಿದ್ದರು. ಮೂಕ ಹಸುವಿನಂತೆ ಸಹಿಸಲು ಬಿಟ್ಟು ಸಿಕ್ಕಿಬಿಟ್ಟಿರುವಳಲ್ಲ!

ಈ ಅತ್ಯಾಚಾರದಿಂದ ಅವಳನ್ನು ರಕ್ಷಿಸಲು ಯಾವ ತಾಯಿಯೂ ಒಂದು ಗಂಡು ಮಗುವನ್ನು ಹಡೆದಿಲ್ಲವೇ?

೭

ಯಾರಾದರೂ ಹಿಡಿದೆಬ್ಬಿಸದ ವಿನಹ ಎದ್ದು ಕುಳಿತುಕೊಳ್ಳಲು ಈ ನಡುವೆ ದುರ್ಗಾದೇವಿಯಿಂದ ಸಾಧ್ಯವಾಗುತ್ತಿರಲಿಲ್ಲ. ಅವಳ ಮಗಳಲ್ಲದೆ ಎಬ್ಬಿಸಿ ಕೂಡಿಸಲು ಬೇರೆ ಯಾರಿದ್ದರು? ಆದುದರಿಂದ ಬೇಕಾದಷ್ಟು ಕೆಲಸಗಳು ಬಿದ್ದಿದ್ದರೂ ಅವಕಾಶ ದೊರಕಿಸಿಕೊಂಡು ಮಧ್ಯೆ ಮಧ್ಯೆ ಆ ಹೆಣ್ಣು ಮಗಳು ತಾಯಿಯ ಬಳಿ ಬಂದು ಕುಳಿತುಕೊಳ್ಳುತ್ತಿದ್ದಳು.

ಇಂದು ಬೆಳಗ್ಗೆ ಕೊಂಚ ಅವಕಾಶ ದೊರೆಯಿತು. ಕೂಡಲೇ ತಾಯಿಯ ಬಳಿ ಬಂದು ಕುಳಿತು ಬೆನ್ನನ್ನು ನಿಧಾನವಾಗಿ ಸವರುತ್ತಿದ್ದಳು. ಅಕಸ್ಮಾತ್ ಒಂದು ಚಿರಪರಿಚಿತ ಕಂಠಸ್ವರವು ಕಿವಿಗೆ ಬಿದ್ದಿತು. ಅವಳ ಹೃದಯದೊಳಗೇ ನಡುಕ ಹುಟ್ಟಿತು.

ಹೋಳಿ ಹಬ್ಬದ ಸಲುವಾಗಿ ಕಾಲೇಜಿಗೆ ರಜ ಬಂದಿತ್ತು. ಆದುದರಿಂದ ಅತುಲನು ಊರಿಗೆ ಬಂದಿದ್ದ. ಇಬ್ಬರು ಮೂವರು ಜೊತೆಗಾರರೊಡನೆ ರಂಗಾಟವಾಡುತ್ತಾ ಜೇಬಿನಲ್ಲಿ ಗುಲಾಲು ತುಂಬಿದ ಶೀಸೆ ಇಟ್ಟುಕೊಂಡು, "ದೊಡ್ಡತ್ತೇ!" ಎಂದು ಕೂಗುತ್ತಾ ಅವನು ಮನೆಯೊಳಗೆ ಬಂದ.

ದುರ್ಗಾದೇವಿಗೆ ಒಂದು ಬಗೆಯ ಮಂಕು—ಮಂಪರ. ಅರ್ಧ ಎಚ್ಚರ, ಅರ್ಧ ನಿದ್ದೆಯಲ್ಲಿ ಹಾಸಿಗೆಯ ಮೇಲೆ ಯಾವಾಗಲೂ ಬಿದ್ದಿರುತ್ತಿದ್ದಳು. ಅತುಲನ ಕಂಠಸ್ವರವು ಕಿವಿಗೆ ಬಿದ್ದೊಡನೆಯೇ ತಾಯಿಯು ಎಲ್ಲಿ ಎದ್ದುಬಿಡುವಳೋ ಎಂದು ಜ್ಞಾನದಾ ವ್ಯಾಕುಲಗೊಂಡಳು. ತಾಯಿಯು ಇವನ ದಾರಿಯನ್ನೇ ಕಾಯುತ್ತಿರುವಳೆಂದು ಅವಳಿಗೆ ಗೊತ್ತಿತ್ತು. ಈಚೆಗೆ ದುರ್ಗಾದೇವಿಯಲ್ಲಿದ್ದ ಆ ಧೈರ್ಯ ಗಾಂಭೀರ್ಯ ಮತ್ತು ಆತ್ಮ ಸನ್ಮಾನದ ಭಾವಗಳು ಕ್ರಮೇಣವಾಗುತ್ತ ಬಂದಿದ್ದವು. ಅವಳ ಬುದ್ಧಿ ವಿವೇಚನೆಗಳು ತೀವ್ರವಾಗಿ ವಿಕೃತಗೊಳ್ಳತೊಡಗಿದ್ದವು. ಸಹನೆ ಎಂಬುದು ಉಳಿಯಲಿಲ್ಲ. ಯಾವುದಾದರೂ ಕಲಹವನ್ನು ಕಂಡರೆ ಏತಕ್ಕೆ ಈ ಕಲಹ ಎನ್ನುತ್ತಿದ್ದ ಅವಳ ಮನಸ್ಸು ಇಂದು ಕಲಹ ಕೋಲಾಹಲಗಳಲ್ಲಿ ಲೀನವಾಗಿಬಿಟ್ಟಿದೆ. ಈ ಮಾರ್ಪಾಡನ್ನು ಮಗಳು ಚೆನ್ನಾಗಿ ಲಕ್ಷಿಸಿದ್ದಳು. ಆದರಿಂದಲೇ ಈಗಿನ ಸಂದರ್ಭದಲ್ಲಿ ಅತುಲನ ಭೇಟಿಯಾದದ್ದೇ ಆದರೆ, ಒಂದು ಜೀವಹಿಂಡುವ

ಕೋಲಾಹಲವಾಗುವುದು—ಅದು ಖಂಡಿತವಾಗಿಯೂ ಅನಿವಾರ್ಯವೆಂದು ಆ ಹುಡುಗಿಯ ಅಂತರಾತ್ಮನಿಗೆ ಚೆನ್ನಾಗಿ ಗೊತ್ತಾಗಿತ್ತು.

ಈ ತೊಂದರೆ ಏನುಮಾಡಿದರೆ ದೂರವಾಗುತ್ತದೆ ಎಂದು ಜ್ಞಾನದಾ ಯೋಚಿಸಿ ವ್ಯಾಕುಲದಿಂದ ತಪಿಸಿದಳು. ಕಡೆಗೆ ಸದ್ದಿಲ್ಲದಂತೆ ಎದ್ದು ಬಾಗಿಲು ಮುಚ್ಚಲು ಅವಳು ಮೆಲ್ಲಗೆ ಹೋಗುತ್ತಿದ್ದಳು. ಅಷ್ಟರಲ್ಲಿಯೇ, "ಲೇ ಜ್ಞಾನದಾ, ಈಗತಾನೆ, ಎಲ್ಲೋ ಅತುಲನು ಮಾತನಾಡಿದಹಾಗಾಯಿತಲ್ಲ ವೇನೆ?" ಎಂದು ಕೇಳಿದಳು.

ಜ್ಞಾನದಾ ಬಾಗಿಲನ್ನು ಹಾಕಿಕೊಂಡುಬಂದು, "ನನಗೇನುಗೊತ್ತಮ್ಮಾ ಅವರಿರಲಾರದು" ಎಂದಳು.

"ಸರಿ ಬಿಡು, ನನಗೆ ಗೊತ್ತು ಅವನೇ! ಎದ್ದು ಕೊಂಚ ನೋಡು ಮತ್ತೆ."

ಚರ್ಚೆಮಾಡುವುದರಿಂದ ತಾಯಿಯು ಕುಪಿತಳಾಗುವಳೆಂದು ಅವಳಿಗೆ ಗೊತ್ತೇ ಇತ್ತು. ಅದರಿಂದ ಅವಳು ಬಾಗಿಲುತೆಗೆದು ಹೊರಗೆ ಇಣಿಕಿನೋಡಿ ದಳು. ಆದರೆ ಹತ್ತಿರ ಯಾರೂ ಕಾಣಿಸಲಿಲ್ಲ. ಆದರೆ ಆ ಮನೆಯ ಪಡ ಸಾಲೆಯ ಆಚೆ ಕೊನೆಯಲ್ಲಿ ಆಗುತ್ತಿದ್ದ ಕೆಲವರ ಶಬ್ದಗಳ ಜೊತೆಗೆ ಅತುಲನ ಶಬ್ದವೂ ಕಿವಿಗೆ ಬಿತ್ತು.

ಇಷ್ಟನ್ನು ತಿಳಿದುಕೊಂಡು ಅವಳು ಸುಮ್ಮನೆ ವಾಪಸ್ಸು ಬರಬಹುದಾ ಗಿತ್ತು. ಆದರೆ ಒಂದು ಸಲ ಅತುಲನನ್ನು ಕಣ್ಣಿಂದ ನೋಡಬೇಕೆಂಬ ಆಸೆ ಅವಳನ್ನು ಕೊಂಚ ಮುಂದಕ್ಕೆ ಎಳೆದುಕೊಂಡು ಹೋಯಿತು.

ಅವಳು ಒಂದು ಕಂಭದ ಮರೆಯಲ್ಲಿ ನಿಂತು ಸುಮ್ಮನೆ ನೋಡತೊಡಗಿ ದಳು. ಅತುಲನು ದೊಡ್ಡತ್ತೆಯ ಕಾಲುಗಳಮೇಲೆ ಗುಲಾಲು ಚೆಲ್ಲಿ ನಗುತ್ತ ನಿಂತಿದ್ದ. ಇತರ ಜೊತೆಗಾರರೂ ಅವನನ್ನೇ ಅನುಕರಿಸಿದರು.

ಕಿರಿಯವಳು ಅಲ್ಲಿರಲಿಲ್ಲ. ಅವಳಲ್ಲಿ ಯಾವುದೋ ವ್ಯಥೆ ಉಂಟಾ ಗಿದ್ದುದರಿಂದ ಅವಳು ಕೊಠಡಿಯಿಂದ ಹೊರಕ್ಕೇ ಬರಲಿಲ್ಲ. ಹಿಂತಿರುಗುವ ಯೋಚನೆ ಮನದಲ್ಲಿ ನೆಲಸಿದ್ದರೂ ಪ್ರಜ್ಞಾರಹಿತಳಂತೆ ಎಲ್ಲಿ ಹೇಗೆ ನಿಂತಿ ದ್ದಳೋ ಹಾಗೆಯೇ ನಿಂತಿದ್ದಳು.

ಬಾಗಿಲ ಶಬ್ದ ಕೇಳಿ ಜ್ಞಾನದಾ ಥಟ್ಟನೆ ಹಿಂತಿರುಗಿ ನೋಡಿದಳು. ವಜ್ರಾಘಾತವಾದಂತಾಯಿತು. ಯಾವುದಕ್ಕಾಗಿ ಹೆದರಿದ್ದಳೋ ಅದೇ ಆಗಿ ಬಿಟ್ಟಿತು— ಅವಳ ರೋಗಪೀಡಿತ, ದುರ್ಬಲ ತಾಯಿಯು ಹೇಗೆಯೋ ಎಡ ವುತ್ತಾ, ಮುಗ್ಗರಿಸುತ್ತಾ ಅದೇ ಕಡೆ ಬಹು ಪ್ರಯಾಸದಿಂದ ಬರುತ್ತಿದ್ದಳು.

ಜ್ಞಾನದಾ ಓಡಿಹೋಗಿ ಎರಡೂ ಕೈಗಳಲ್ಲಿ ತಾಯಿಯನ್ನು ಹಿಡಿದು ಕೊಂಡಳು. "ಅಮ್ಮಾ, ಅಲ್ಲಿಗೆ ಹೋಗಬೇಡಮ್ಮ--ಬೇಡವಮ್ಮ. ಹಿಂತಿರುಗಿ"

ದುರ್ಗಾದೇವಿಯು ಕಣ್ಣು ಕೆಂಪಗೆ ಮಾಡಿಕೊಂಡು, "ಏಕೆ?" ಎಂದಳು.

"ನಾನದಕ್ಕೆ ಉತ್ತರಕೊಡಲಾರೆನಮ್ಮಾ. ಇನ್ನು ಅವರ ಆಸೆ ಇಲ್ಲ ವಮ್ಮಾ, ಒಳಕ್ಕೆ ನಡಿ."

"ಬಿಡೆ, ಬಿಡೆ ನನ್ನ— ಬಿಟ್ಟುಬಿಡೆ ಭಾಗ್ಯಹೀನೆ" ಎಂದು ಒಂದುಬಗೆಯ ಅಮಾನುಷ ಶಕ್ತಿಯಿಂದ ಮಗಳ ಬಾಹುಬಂಧನವನ್ನು ಬಿಡಿಸಿಕೊಂಡು ಮುಂದೆ ನಡೆದಳು. ಜ್ಞಾನದೆಯು ಯಂತ್ರದ ಬೊಂಬೆಯಂತೆ ತಾಯಿಯನ್ನು ಅನುಸರಿಸಿ ಹಿಂದೇ ನಿಂತಳು. ಹಾಸಿಗೆಯಿಂದೇಳಲು ಕೂಡ ಶಕ್ತಿಯಿಲ್ಲದಿದ್ದ ದುರ್ಗಾದೇವಿಯು ಎದುರಿಗೆ ಬಂದು ನಿಂತಿರುವುದನ್ನು ನೋಡಿ ಎಲ್ಲರೂ ಆಶ್ಚರ್ಯಚಕಿತರಾದರು!

ಅವಳ ರಕ್ತಹೀನ, ಶಕ್ತಿಹೀನ, ಕಳಾಹೀನ ಮುಖದಲ್ಲಿ ಹಸಿದ ಹುಲಿಯ ದೃಷ್ಟಿಯು ಮಾತ್ರ ಗೋಚರವಾಯಿತು? ಆ ಪ್ರಜ್ವಲಿಸುವ ಜ್ವಾಲಾ ಸದೃಶ ಕಣ್ಣುಗಳನ್ನು ಈಕ್ಷಿಸಿದ ಅತುಲನು ಹೆದರಿಕೆಯಿಂದ ತಲೆ ತಗ್ಗಿಸಿದ.

"ಅತುಲ, ನಾವು ನಿನಗೇನು ಕೆಡಕುಮಾಡಿದ್ದೆವು? ನೀನು ಹೀಗೆ ನಮ್ಮ ಸರ್ವನಾಶಮಾಡಿದೆಯಲ್ಲಾ?''

ಅತುಲನೇನು ಉತ್ತರಕೊಟ್ಟಾನು? ಅಪರಾಧದ ಹೊರೆಯಿಂದ ಅವ ನಿಂದ ತಲೆಯೆತ್ತಲು ಸಹ ಆಗಲಿಲ್ಲ.

ಆದರೆ ಅತುಲನ ಪರವಾಗಿ ಉತ್ತರಕೊಡುವ ಭಾರವನ್ನು ಸ್ವಯಂ ಸ್ವರ್ಣಮಂಜರಿಯೇ ವಹಿಸಿದಳು. ಅವಳದೆಂದು ಹೇಳಿಕೊಳ್ಳಲು ಏನೂ ಇಲ್ಲ— ಅವಳು ಯಾವುದಕ್ಕೂ ಚಿಂತಿಸಬೇಕಾಗಿಲ್ಲ—ಇದರ ಬಲದಿಂದ ಅವಳು ನಿಜವಾಗಿಯೂ ಬಹಳ ದುಷ್ಟಳಾಗಿಬಿಟ್ಟಿದ್ದಳು. ಅದಕ್ಕೆ ಧೋರಣೆಯಿಂದ

ತಲೆಯೆತ್ತಿ, "ಇಲ್ಲವೇ, ಅತುಲ ನಿಮ್ಮ ಸರ್ವನಾಶವೇನು ಮಾಡಿದ ? ಹೇಳು ಕೇಳಿಯಾದರೂ ಕೇಳೋಣ." ಎಂದಳು.

"ಇದಕ್ಕೆ ನಿನಗೆ ನಾನೇನು ಉತ್ತರಕೊಡಲಿ ಅಕ್ಕ? ನಾವು ಯಾರಲ್ಲಿ ಈ ಮಾತುಗಳನ್ನು ಕೇಳಿದೆನೋ ಅವನಿಗೆ ಗೊತ್ತು ನಮ್ಮ ಸರ್ವನಾಶವೇನು ಮಾಡಿರುವನೆಂಬುದು."

"ನಾವೇನು ಹುಲ್ಲುಮೇಯುವುದಿಲ್ಲ ಕಣೆ, ದುರ್ಗಾ! ನಮಗೆಲ್ಲ ಗೊತ್ತು. ನಿನ್ನ ಈ ಕಾಳಿಯನ್ನು ಮದುವೆಯಾಗುತ್ತೇನೆಂದು ರಿಜಿಸ್ಟರ್ಡ್ ಕಾಗದ ಬರೆದು ಕೊಟ್ಟಿದ್ದನೇನು— ಇಷ್ಟು ಜನರೆದುರಿಗೆ ಅವನನ್ನು ಧಿಕ್ಕಾರಮಾಡುತ್ತಿರುವೆ ಯಲ್ಲ—ಅಪಮಾನಮಾಡಲು ಓಡಿಬಂದಿರುವೆಯಲ್ಲ! ಹೋಗು, ಹೋಗು, ನಿನ್ನ ಮನೆಗೆ ಹೋಗು. ವರ್ಷಾವದಿ ಹಬ್ಬದಲ್ಲಿ ಸುಖವಾಗಿ ಸಂತೋಷವೆಂದಿರು ವಾಗ ಬಂದು ನನ್ನ ಮನೆಯಲ್ಲಿ ತೊಂದರೆಮಾಡಬೇಡ!"

"ನಾನು ತೊಂದರೆಮಾಡಲು ಬರಲಿಲ್ಲ ಅಕ್ಕ!" ಎಂದು ದುರ್ಗಾದೇ ವಿಯು ಅತುಲನಕಡೆ ತಿರುಗಿ, "ಅತುಲ, ನಾವು ಈ ಒಂದು ವರುಷವನ್ನು ಹೇಗೆ ಕಳದಿದ್ದೇವೆಂಬುದು ನಿನಗೆ ಗೊತ್ತಿಲ್ಲ. ಅಂತರ್ಯಾಮಿಗೊಬ್ಬನಿಗೇ ಗೊತ್ತು. ನಿನ್ನ ಮನಸ್ಸಿನಲ್ಲಿ ಹೀಗೆಯೇ ಇದ್ದರೆ ಅವರು ಸಾಯುವಾಗ ನೀನೇಕೆ ಅವರಿಗೆ ನಂಬಿಕೆ ಹುಟ್ಟಿಸಿದೆ? ಆಗಲೇ ನಿನ್ನ ಮನಸ್ಸಿನ ಮಾತ ನ್ನೇಕೆ ಬಿಚ್ಚಿ ಹೇಳಲಿಲ್ಲ?" ಎಂದಳು.

ಸ್ವರ್ಣಮಂಜರಿಯ ಕೋಪ ಉಕ್ಕೇರಿತು. "ನೋಡು ಹೇಳಿದ್ದೇನೆ. ನೀನು ನನ್ನ ಮಗುವನ್ನು ಅನ್ನಬೇಕಾದುದೇನೂ ಇಲ್ಲ. ಬೇಡ, ಇದರಿಂದ ಒಳ್ಳೆಯದಾಗುವುದಿಲ್ಲ. ನಾವು ಬದುಕಿರುವವರೆಗೆ ಅವನಿಗೆ ಹಾಗೆಲ್ಲ ಮಾತು ಗೀತು ಕೊಡುವ ಸ್ವಾತಂತ್ರ್ಯವಿಲ್ಲ."

ಇಷ್ಟು ಜನರೆದುರಿಗೆ ಈ ಪ್ರಸಂಗ ನಡೆದದ್ದರಿಂದ ಅತುಲನು ಅಪ ಮಾನವಾಯಿತೆಂದು ತಿಳಿದ. ತನ್ನ ಹಿರಿಯತ್ತೆಯ ಜೋರನ್ನು ನೋಡಿ, "ನಾನೇನು ಮದುವೆಮಾಡಿಕೊಳ್ಳುತ್ತೇನೆಂದು ವಚನ ಕೊಟ್ಟಿದ್ದೆನೆ? ನನ್ನ ಕಾಲು ಬಿಗಿಯಾಗಿ ನಿಮ್ಮ ಮಗಳು ಹಿಡಿದು ಬಿಟ್ಟಳು. ಏನು ಮಾಡಿದರೂ ಬಿಡಲಿಲ್ಲ. ಸುಮ್ಮನೆ ತಲೆ ಚಚ್ಚಿಕೊಳ್ಳುತ್ತಿದ್ದಳು. ಅಷ್ಟೇ ಅಲ್ಲ, ಅವಳೇ

ಹೇಳಿದಳು, "ನಿಮ್ಮ ಬಾಯಿಂದ ತಂದೆಯವರಿಗೆ ಮಾತುಕೊಟ್ಟು ಬಿಡಿ. ತಿಳಿಸಿ ಬಿಡಿ" ಎಂದು. ನಾನೇನು ಮಾಡಲಿ. ಅಲ್ಲಿ ನೆರೆದಿದ್ದ ಜನರೆದುರಿಗೆ ನನಗೆ ನಾಚಿಕೆಯಿಂದ ಜೀವ ಹಿಂಡಿಕೊಳ್ಳುವಂತಾಗಿತ್ತು. ಅವರಿಂದ ಕಾಲು ಬಿಡಿಸಿ ಕೊಂಡರೆ ಸಾಕೆಂದು ನಾನು ಉಪಾಯದಿಂದ ತೊಡಕು ಬಿಡಿಸಿಕೊಂಡಾ ಕ್ಷಣವೇ ವಚನವಾಗಿ ಹೋಯಿತೇನು?" ಎಂದುಬಿಟ್ಟ.

ಸ್ವರ್ಣಮಂಜರಿಯು ಕಿಲಕಿಲನೆ ನಕ್ಕಳು. "ಅಮ್ಮಯ್ಯಾ! ಎಂತಹ ನಾಚಿಕೆಗೇಡಿನ ಕೆಲಸವೇ! ಇದೇನು ಅತುಲ ನೀನು ಹೇಳುವುದು? ಈ ಮೂಳಿ ನಿನ್ನ ಕಾಲು ಹಿಡಿದುಕೊಂಡು ತನ್ನಬಾಯಿಂದಲೇ ನನ್ನನ್ನು ಮದುವೆಯಾಗು ಎಂದಳೆ! ಅಯ್ಯೋ ಘೋರ ಕಲಿಕಾಲವೇ!"

"ನಾನು ಹೇಳಿದುದು ಸುಳ್ಳೋ ನಿಜವೋ ಎಂಬುವನ್ನು ನಿನ್ನ ಮಗಳನ್ನೇ ಕೇಳಬಹುದಲ್ಲ ಅತ್ತೆ! ಅವಳು ಕಾಲುಗಳ ಮೇಲೆ ಬಿದ್ದು ತಲೆ ಚಚ್ಚಿಕೊಳ್ಳು ತ್ತಿದ್ದುದನ್ನು ನೀನೂ ನೋಡಿದೆಯಲ್ಲ. ಹೀಗಿದೆ. ಅಲ್ಲ ನಾನು ಇಂತಹ ಹುಡುಗಿಯನ್ನು ಮದುವೆಮಾಡಿಕೊಳ್ಳಲು ಇಷ್ಟವಾದರೂ ಪಟ್ಟೇನೆ? ಇದ ಕ್ಕಿಂತ, ನದಿಯಲ್ಲಿ ಮುಳುಗಿ ಪ್ರಾಣಬಿಡಬೇಕೂಂದಂತೆ ಕುತ್ತಿಗೆಗೆ ಕಟ್ಟಿ ಕೊಳ್ಳುವುದಕ್ಕೆ, ಕೊಡ, ಹಗ್ಗ ಸಿಗುವುದಿಲ್ಲವೇ?"

ಅತುಲನ ಜೊತೆಯವರು ಪಕ್ಕಕ್ಕೆ ತಿರುಗಿ ನಗತೊಡಗಿದರು.

ದುರ್ಗಾದೇವಿಯು ಈ ಅಪಮಾನದಿಂದ ಹುಚ್ಚಿಯಂತಾದಳು. "ಅಯ್ಯೋ ನಿಷ್ಠುರ! ಕೃತಘ್ನ! ನಿನಗೆ ಬೇಕಾದರೆ ಹಗ್ಗ, ಕೊಡವೆರಡನ್ನೂ ನಾನು ದಾನವಾಗಿ ಕೊಡುತ್ತೇನೆ—ಹೋಗಿ ಸಾಯಿ—ನೀನು ಸಾಯುವುದೇ ಒಳ್ಳೆಯದು! ಇಷ್ಟು ಜನರೆದುರಿಗೆ ಈ ಹುಡುಗಿಯನ್ನು ನೀನು ಅಪಮಾನ ಮಾಡುತ್ತಿರುವೆಯಲ್ಲಾ! ಇದೇ ಹುಡುಗಿಯೇ ಒಂದುಸಲ ತನ್ನ ಜೀವದ ಪರಿವೆ ಬಿಟ್ಟು ನಿನ್ನನ್ನು ಯಮರಾಜನ ಬಾಯಿಂದ ಜೀವಸಹಿತ ಕಿತ್ತುಕೊಂಡು ಬಂದು ಜೀವದಾನಮಾಡಿದ್ದಾಳೆ! ಅದೆಲ್ಲ ಆಗಲೆ ಮರೆತುಹೋಯಿತೆ?" ಎಂದು ಚೀತ್ಕರಿಸಿದಳು.

ದುರ್ಗಾದೇವಿಯ ಚೀತ್ಕಾರವನ್ನು ಕೇಳಿ ತನ್ನ ವ್ಯಥೆಯನ್ನು ಮರೆತು ಕಿರಿಯ ಸೊಸೆಯು ಎದ್ದೋಡಿ ಬಂದಳು. ಆಗ, ಸ್ವರ್ಣಮಂಜರಿಯು,

 

"ಯಾಕೆ ಪಿಸಿಪೀಡೆ, ಇಷ್ಟೊಂದು ಸೊಕ್ಕಿಬಿಟ್ಟಿದ್ದೀಯೆ! ಹೊರಡು, ನನ್ನಮನೆಯಿಂದ ಹೊರಡು! ಎಂದು ಗಟ್ಟಿಯಾಗಿ ಗದರುತ್ತಿದ್ದಳು.

ಜ್ಞಾನದಾ ಚೇತನಾರಹಿತ ಕಲ್ಲು ಪ್ರತಿಮೆಯಾಗಿ ನಿಂತಿದ್ದಳು. ಲಜ್ಜೆ, ಅಭಿಮಾನ, ಅಪಮಾನ, ಒಳ್ಳೆಯದು, ಕೆಟ್ಟದ್ದು, ತುಚ್ಛೀಕಾರ, ಯಾವುದೂ ಅವಳ ಹೃದಯವನ್ನು ತಟ್ಟಲು ಸಮರ್ಥವಾಗಿರಲಿಲ್ಲ. ಈ ಎಲ್ಲ ಭಾವನೆಗಳನ್ನೂ ಅತಿಕ್ರಮಿಸಿ ಅವಳು ನೆಟ್ಟು ನಿಂತಿದ್ದಳು.

ಈ ಅದೃಷ್ಟಹೀನ ಮೂರ್ತಿಯನ್ನು ನೋಡಿ ಕಿರಿಯ ಸೊಸೆಯು ಹೆದರಿಕೆಯಿಂದ ನಡುಗಿ ಆವಳನ್ನು ಅಲ್ಲಾಡಿಸಿ, "ಜ್ಞಾನದಾ! ಮಗು!" ಎಂದಳು.

ಕಿರಿಯ ಸೊಸೆಗೆ ಇಲ್ಲಿ ನಡೆದ ಮಾತುಕತೆಗಳೆಲ್ಲ ಕಿವಿಗೆ ಬಿದ್ದಿತ್ತು.

ಅಲ್ಲಾಡಿಸಿದ್ದರಿಂದ ಪ್ರಜ್ಞೆ ಬಂದವಳಂತಾಗಿ ಅವಳು, "ಏನು ಚಿಕ್ಕಮ್ಮ?" ಎಂದಳು.

"ಇನ್ನೂ ಇಲ್ಲಿ ಏತಕ್ಕಾಗಿ ನಿಂತಿದ್ದೀಯೆ ಮಗು; ನಿನ್ನ ತಾಯಿಯನ್ನು ಕರೆದುಕೊಂಡು ಮನೆಗೆ ನಡಿ" ಎಂದು ಕಿರಿಯ ಸೊಸೆ ಹೇಳಿದಳು.

"ನಡಿಯಮ್ಮ ನಡಿ" ಎಂದು ಜ್ಞಾನದಾ ತಾಯಿಯ ಕೈಹಿಡಿದು ಮನೆಯೊಳಕ್ಕೆ ಕರೆದುಕೊಂಡು ಹೋದಳು.

"ನೋಡಿದೆಯಾ ಎಷ್ಟು ಪ್ರತಿಷ್ಠೆ, ಎಷ್ಟು ಗರ್ವ! ಇದಕ್ಕೇ ಹೇಳುವುದು ಪೂರ್ಣಿಮಾ ಚಂದ್ರನನ್ನು ಕೈಯಲ್ಲಿ ಹಿಡಿಕೊಳ್ಳುವ ಆಸೆಯೆಂದು" ಎಂದು ಸ್ವರ್ಣಮಂಜರಿಯು ಉದಾಹರಿಸಿದಳು.

ಅತುಲ ನಗುವನ್ನೊತ್ತಿ ಹಲ್ಲುಕಿರಿದು, "ಕೇಳಿದೆಯಾ ಚಿಕ್ಕತ್ತೆ? ಎಷ್ಟು ನಾಚಿಕೆಗೇಡು" ಎಂದ.

"ಚೋಟುದ್ದ ಹುಡುಗೀದು ಇಷ್ಟೊಂದು ಲೀಲೆ! ಅಬ್ಬ, ಘೋರ ಕಲಿಕಾಲವೆ!" ಎಂದು ಸ್ವರ್ಣಮಂಜರಿಯ ಬಾಯಿಂದ ಹೊರಬಿತ್ತು. ಗಾಜು ಒಡೆದಂತೆ ಇತ್ತು ಆ ಧ್ವನಿ.

ಅದಕ್ಕೆ ಕಿರಿಯವಳ ಪ್ರತ್ಯುತ್ತರ? ಘೋರ ಕಲಿಕಾಲವಾದ್ದರಿಂದಲೇ ತಡೆದುಕೊಂಡು ಹೋಯಿತು ಅಕ್ಕ! ಇನ್ಯಾವುದಾದರೂ ಯುಗವಾಗಿದ್ದಿದ್ದರೆ ಇಷ್ಟುಹೊತ್ತಿಗೆ ಲಜ್ಜೆಯಿಂದ ಜರ್ಝರಿತಳಾಗಿ ಭೂಮಿ ತಾಯಿಯು ಬಿಂದು

ಎರಡು ಹೋಳಾಗಿ ಬಿಡುತ್ತಿದ್ದಳು. ಗೊತ್ತಾಯಿತೆ ಅತುಲ!" ಇಷ್ಟು ಅಂದದ್ದೇ ತಡ ಅವಳೂ ತನ್ನ ಕೊಠಡಿಗೆ ಹೋಗಿಬಿಟ್ಟಳು.

ಈ ವ್ಯಂಗ್ಯಭಾವದ ನಿಜಾಂಶವನ್ನು ತಿಳಿಯಲಾರದೆ ಸ್ವರ್ಣಮಂಜರಿಯು ಆನಂದಿತಳಾದಳು. "ಅದೇ ಕಣೆ. ನಾನೂ ಹೇಳುತ್ತಾ ಇರುವುದು!"

ಆದರೆ ಅತುಲನ ಮುಖವು ಕಪ್ಪಿಟ್ಟುಹೋಯಿತು. ಕಿರಿಯ ಸೊಸೆಯು ಹೇಳಿದುದು ಸ್ವರ್ಣಮಂಜರಿಯ ಬುದ್ಧಿಗೆ ಅರ್ಥವಾಗದಿದ್ದರೂ ಸಹ ಅತುಲನಿಗೆ ಅರ್ಥವಾಗಿ ಬಿಟ್ಟಿತು. ಆದ್ದರಿಂದಲೇ ಅವನು ಕೊಂಚ ಹೊತ್ತು ಪೆಚ್ಚಾಗಿ ಮೌನದಲ್ಲಿ ಅಲ್ಲಿಯೇ ಕುಳಿತಿದ್ದ. ಎದ್ದು ತನ್ನನ್ನು ತಾನು ನೋಡಿಕೊಂಡ. ಆ ಹೋಳಿಹಬ್ಬದ ದಿವಸ ಯಾರೋ ಅವನ ಬಟ್ಟೆಬರೆಗಳನ್ನೆಲ್ಲಾ ಕೆಂಪು ಬಣ್ಣದಿಂದ ತೋಯಿಸಿ ಮುಖಕ್ಕೆ ಕಪ್ಪು ಬಳಿದು ಹೋಗಿರುವಂತೆ ಅವನಿಗೆ ಭಾಸವಾಯಿತು.

ನಿಜವಾದ ವಿಷಯವು ಇದುವರೆಗೂ ಮುಚ್ಚಿಡಲಾಗಿತ್ತು. ಆದರೆ ಇಂದು ಅದೂ ಬಯಲಾಗಿ ಬಿಟ್ಟಿತು. ನೆರೆಹೊರೆಯ ಹಿತಾಕಾಂಕ್ಷಿಗಳ ಕೃಪೆಯಿಂದ, ಬೇಗಲೇ ಅತುಲನ ವಿವಾಹವು ಅನಾಥನಾಥನ ಹಿರಿಯ ಮಗಳಾದ ಮಾಧುರಿಯೊಡನೆ ಆಗುವುದಿದೆಯೆಂಬ ಸಮಾಚಾರವು ದುರ್ಗಾದೇವಿಯ ಕಿವಿಯವರೆಗೂ ಮುಟ್ಟಿಯೇ ಬಿಟ್ಟಿತು. ಈ ಮದುವೆಯ ಮಧ್ಯಸ್ಥಿಕೆಯನ್ನು—ಅಂದರೆ ದಳ್ಳಾಳಿಯ ಕೆಲಸವನ್ನು ಸ್ವಯಂ ಸ್ವರ್ಣಮಂಜರಿಯೇ ಮಾಡಿದ್ದಳೆಂದು ಹೇಳಬೇಕಾದ ಪ್ರಮೇಯವಾದರೂ ಏನಿದೆ? ಹುಡುಗಿಯನ್ನು ನೋಡಿ ಅತುಲನು ಸಹ ಮನಃಪೂರ್ತಿಯಾಗಿ ಒಪ್ಪಿಬಿಟ್ಟಿದ್ದ.

೮

ಮಾಧುರಿಯು ತೀರ ಬಾಲ್ಯದಿಂದಲೂ ತನ್ನ ಸೋದರಮಾವನ ಮನೆಯಲ್ಲಿಯೇ ಇದ್ದಳು. ಅವಳು ಕಲ್ಕತ್ತೆಯಲ್ಲಿಯೇ ಇದ್ದ ಮಹಾಕಾಳಿ ಪಾಠಶಾಲೆಯಲ್ಲಿ ಓದುತ್ತಿದ್ದಳು. ಅವಳಿಗೆ ಇಂಗ್ಲೀಷು, ಬಂಗಾಲಿ ಮತ್ತು ಸಂಸ್ಕೃತದ ಶಿಕ್ಷಣವಾಗುತ್ತಿತ್ತು—ಹಾಡುವುದಕ್ಕೆ ಬರುತ್ತಿತ್ತು. ಈಗಿನ ಕಾಲದ ಹುಡುಗಿಯರು ಕಲಿಯಲೇ ಬೇಕಾದ ನಕ್ಕಿ ಕೆಲಸ, ನಿಟ್ಟಿಂಗ್ ಇತ್ಯಾದಿ

ಗಳೂ ಅವಳಿಗೆ ಬರುತ್ತಿತ್ತು. ಅದೂ ಅಲ್ಲದೆ ಶಿವನ ಮೂರ್ತಿಯನ್ನು ತಯಾರು ಮಾಡಿ ಅವನ ಮುಂದೆಸ್ತೋತ್ರಪಾಠಮಾಡುವುದೂ ಚೆನ್ನಾಗಿ ಬರುತ್ತಿತ್ತು. ನೋಡುವುದಕ್ಕೂ ಬಹಳ ಸುಂದರವಾಗಿದ್ದಳು.

ಈ ಸಲ ಎರಡು ತಿಂಗಳು ತವರು ಮನೆಯಲ್ಲಿ ಇದ್ದು ಹೋಗಬೇಕೆಂದು ಮಾಧುರಿಯು ದುರ್ಗಾಪೂಜೆಯ ಕಾಲಕ್ಕೆ ಬಂದಿದ್ದಳು. ಆಗಲೇ ಈ ವಿವಾಹದ ಮಾತುಕತೆಗಳು ನಿಷ್ಕರ್ಷೆಯಾಯಿತು. ಅತುಲನಂತಹ ದುರ್ಲಭ ಸುಪಾತ್ರನನ್ನು ಎಲ್ಲಿಯೂ ಹುಡುಕಬೇಕಾಗಲೇ ಇಲ್ಲ. ಸ್ವತಃ ಅವನೇ ಬಂದು ಸಿದ್ಧನಾಗಿದ್ದ. ಈ ವಿಚಾರದಲ್ಲಿ ಸ್ವರ್ಣಮಂಜರಿಯ ಕೈವಾಡವು ಸಂಪೂರ್ಣವಾಗಿತ್ತು.

ಕಿರಿಯ ಸೊಸೆಯ ಸಹೋದರರು ಆಸ್ತಿವಂತರು. ಅವಳೂ ತಾಯಿಯೂ ಜೀವಂತರಾಗಿದ್ದರು. ಮಗಳು ಗರ್ಭಿಣಿಯೆಂದು ತಿಳಿದು ಅವಳನ್ನು ಕರೆದು ಕೊಂಡು ಹೋಗಲು ಆಕೆಯು ಜನರನ್ನು ಕಳುಹಿಸಿದ್ದಳು. ಅವರೊಡನೆ ಮಾಧುರಿಯೂ ಬಂದಿದ್ದಳು. ಅವಳು ತನ್ನ ದುರ್ಗಾದೊಡ್ಡಮ್ಮನನ್ನು ಬಹಳ ದಿವಸಗಳಿಂದ ನೋಡಿರಲಿಲ್ಲ. ಅದಕ್ಕೆ ಬಂದು ಪ್ರಣಾಮಮಾಡಿದಳು.

"ಚಿರಂಜೀವಿಯಾಗಿ ಸುಖವಾಗಿ ಮುತ್ತೈದೆ ಸಾವಿತ್ರಿಯಾಗಿ ಬಾಳು ಮಗಳೆ!'' ಎಂದು ದುರ್ಗಾದೇವಿಯು ಬಹಳ ಹೊತ್ತು ಮಾಧುರಿಯ ಕಡೆಯೇ ನೋಡುತ್ತಿದ್ದಳು. ಅವಳು ಮೊದಲೇ ಸುಂದರಿ. ಮೇಲಾಗಿ ಅವಳ ಅತ್ತೆ ಮಾವಂದಿರು ಅವಳನ್ನು ಚೆನ್ನಾಗಿ ಪೋಷಿಸಿ ಸಿಂಗರಿಸಿ ಒಳ್ಳೊಳ್ಳೆ ಬಟ್ಟೆಬರೆ ಗಳನ್ನು ಉಡಿಸಿ, ಅಂದವಾದ ಒಡವೆಗಳನ್ನು ತೊಡಿಸಿ ಕಳುಹಿಸಿದ್ದರು.

ಮಾಧುರಿಯ ಸೋದರತ್ತೆ ಕಲ್ಕತ್ತೆಯವಳೇ. ಹೆಣ್ಣುಮಕ್ಕಳನ್ನು ಹೇಗೆ ಸಿಂಗರಿಸಬೇಕೆಂದು ಅವಳು ಚೆನ್ನಾಗಿ ತಿಳಿದಿದ್ದಳು. ಮಾಧುರಿಯ ಮೈಮೇಲೆ ಕೆಲವು ಆರಿಸಿದ ಬಂಗಾರದ ಒಡವೆಗಳಿದ್ದವು. ಬಹು ಚೆನ್ನಾಗಿ ಹುಡುಗಿಗೆ ಒಪ್ಪುತ್ತಿದ್ದವು. ಕೆಂಪು ಹೂವಿನ ಅಗಲವಾದ ಅಂಚುಳ್ಳ ಒಂದು ಒಳ್ಳೆಯ ಸೀರೆಯನ್ನು ಒಪ್ಪವಾಗಿ ಉಟ್ಟಿದ್ದಳು. ಬೆನ್ನಿನ ಮೇಲೆ ಹರಡಿದ್ದ ಕೂದಲು ಹೆಚ್ಚು ಶೋಭಾಯಮಾನವಾಗಿತ್ತು. ಹಣೆಯಮೇಲೆ ಅಂದವಾಗಿ ಕುಂಕುಮದ ಬೊಟ್ಟು ಇಟ್ಟಿದ್ದಳು. ದುರ್ಗಾದೇವಿಗೆ ಆ ಹೆಣ್ಣುಮಗಳನ್ನು

ಎಷ್ಟು ನೋಡಿದರೂ ತಣಿಯದು. ರೆಪ್ಪೆ ಕೂಡ ಮಿಟುಕಿಸದೆ ನೋಡಿಯೇ ನೋಡಿದಳು.

ಇದಕ್ಕಿದ್ದಂತೆಯೇ ಒಂದು ದೀರ್ಘಶ್ವಾಸ ಅವಳ ಬಾಯಿಂದ ಹೊರ ಬಿತ್ತು. "ಆಹಾ! ಎಷ್ಟು ಅಂದವಾದ ಹೆಣ್ಣಿತಾಯಿ. ಒಳ್ಳೆ ಚಿನ್ನದ ಬೊಂಬೆ!" ಎಂದು ಕಾಲಬಳಿ ಕುಳಿತಿದ್ದ ತನ್ನ ಮಗಳನ್ನು—ಮಲಿನ ಮುಖದ, ಭಾಗ್ಯಹೀನ!—ಮಗಳನ್ನು ನೋಡಿ ಅವಳ ಕಣ್ಣುಗಳು ಉರಿಯತೊಡಗಿದವು. ಮಗ್ಗುಲಾಗಿ ಒಣಕಂಠದಿಂದ ಅಂದುಕೊಂಡಳು, "ಅಯ್ಯೋ! ನನ್ನ ಹೊಟ್ಟೆಯಲ್ಲಿ ಹುಟ್ಟಿತೇ ಈ ಕರೀದೆವ್ವ!"

ಮನೆಯೊಳಗೆ ಮಾಧುರಿಯು ಪ್ರವೇಶಿಸುತ್ತಿದ್ದ ಹಾಗೆಯೇ ಅವಳ ರೂಪು, ಶೃಂಗಾರಗಳನ್ನು ನೋಡಿ ಜ್ಞಾನದೆಯು ತನ್ನನ್ನು ತಾನೇ ಹಿಂಡಿ ಕೊಂಡು ಸಂಕೋಚದಿಂದ ಭೂಮಿಗೆ ಇಳಿದು ಹೋಗಿದ್ದಳು.

ಅಂತಹವಳನ್ನು, "ಅಕ್ಕ, ಬಾರೆ, ಕೊಂಚ ಮಾತುಕತೆ ಆಡೋಣ" ಎಂದು ಮಾಧುರಿಯು ಕರೆದಳು.

ಅದಕ್ಕೆ ಜ್ಞಾನದೆಯು ಅಸ್ಪಷ್ಟ ಸ್ವರದಲ್ಲಿ ಹೇಳಿದುದು ಏನೂ ಅರ್ಥ ವಾಗಲಿಲ್ಲ. ಆದರೆ ಬರೀ ಆ ಗುಯ್‌ಗುಯ್ ಶಬ್ದವನ್ನಷ್ಟೇ ಕೇಳಿ ದುರ್ಗಾ ದೇವಿಯು ತೀಕ್ಷ್ಣಸ್ವರದಲ್ಲಿ, "ಈ ಕರಿಮುಸಡಿ ಹೊತ್ತುಕೊಂಡು ಸುಮ್ಮನೆ ಎಲ್ಲರ ಮುಂದೆಯೂ ಮೆರೆಯಬೇಡ. ಇಲ್ಲೇ ಕುಕ್ಕರಿಸು" ಎಂದಳು.

ಜ್ಞಾನದಾ ಸುಮ್ಮನೆ ಕುಳಿತಿದ್ದಳು.

ಮಾಧುರಿಯು ಹೊರಟು ಹೋದಮೇಲೆ ದುರ್ಗಾದೇವಿಯು ಒಂದೆರಡು ಸಲ ಆಃ, ಊಃ ಎಂದಳು. ಮಿತಿಯಿಲ್ಲದೆ ನೊಂದು ಬೆಂದ ಜೀವ! "ಕೊಂಚ ತಲೆ ಒತ್ತಲೇನಮ್ಮಾ" ಎಂದು ಜ್ಞಾನದಾ ಮೆಲ್ಲಗೆ ಕೇಳಿದಳು.

"ಬೇಡ."

"ಒಂದು ಸ್ವಲ್ಪ ಔಷಧಿ—"

"ಬೇಡವೇ, ಬೇಡ! ಬೇಡ, ಹೋಗು ಎದ್ದುಹೋಗು—ಎದ್ದುಹೋಗೆ ನನ್ನ ಹಾಸಿಗೆಯಿಂದ. ನಿನ್ನ ಮುಖ ನೋಡುತ್ತಲೇ ದೇಹವೆಲ್ಲ ಬೆಂದು ಭಸ್ಮ ವಾಗಿ ಹೋಗುತ್ತೆ" ಎಂದು ಗದರಿ ಮಗಳನ್ನು ಕಾಲಿನಿಂದ ನೂಕಿಬಿಟ್ಟಳು.

ಜ್ಞಾನದಾ ಬಹಳ ಸಹಿಸಿದ್ದಳು. ಆದರೆ ಈ ಪೆಟ್ಟು ಅವಳಿಂದ ಸಹಿಸಲಾಗಲಿಲ್ಲ. ಸುಮ್ಮನೆ ಎದ್ದು ಹಾಸಿಗೆಯಿಂದ ದೂರ ಸರಿದು ನೆಲದ ಮೇಲೆ ಬೋರಲು ಮಲಗಿಬಿಟ್ಟಳು. ಅವಳ ಕಣ್ಣೀರಿನಿಂದ ನೆಲವೆಲ್ಲ ಒದ್ದೆ ಮುದ್ದೆಯಾಯಿತು.

ಅವಳು ಎರಡೂ ಕೈಗಳನ್ನು ಚಾಚಿ, "ಭಗವಂತ! ನಾನು ಯಾರಲ್ಲಿ ಯಾವ ಅಪರಾಧ ಮಾಡಿದ್ದೇನೆ? ನಾನೇಕೆ ಎಲ್ಲರ ಕಣ್ಣಿಗೂ ಕಂಟಕಪ್ರಾಯಳಾಗಿದ್ದೇನೆ? ನನಗೆ ರೂಪವಿಲ್ಲ--ಒಪ್ಪಿದೆ. ಬಟ್ಟೆಬರೆ ಇಲ್ಲ, ತಂದೆಯೂ ಇಲ್ಲ. ಇದರಲ್ಲಿ ನನ್ನದೇನು ತಪ್ಪು? ಬಣಗಿ ಜೀರ್ಣವಾದ, ಕಳೆಯಿಲ್ಲದ ಸತ್ವವಿಲ್ಲದ ದೇಹ—ಈ ರೋಗಗ್ರಸ್ತ, ರಕ್ತಹೀನ, ನಿಸ್ತೇಜ ಮುಖ ಯಾರೊಬ್ಬರನ್ನೂ ಆಕರ್ಷಿಸಲಾರದು--ನಿಜ! ಆದರೆ ಇದರಲ್ಲಿ ನನ್ನದೇನು ತಪ್ಪು? ನನ್ನನ್ನು ಮದುವೆಯಾಗುವವರು ಯಾರೂ ಇಲ್ಲ. ಆದರೂ ವಯಸ್ಸು ಏರಿ ಹೋಗುತ್ತಲೇ ಇದೆ— ಇದೂ ನನ್ನ ತಪ್ಪೇ? ಪ್ರಭು, ನನ್ನ ದೋಷ ಅಪರಾಧಗಳು ಅಷ್ಟೊಂದು ಅಧಿಕವಾಗಿದ್ದರೆ ನನ್ನನ್ನು ನನ್ನ ತಂದೆಯ ಬಳಿಗೆ ಕಳುಹಿಸಿಬಿಡು. ಅವರು ನನ್ನನ್ನು ಎಂದಿಗೂ ಹೀಗೆ ಆಚೆ ನೂಕುವುದಿಲ್ಲ." ಎಂದು ಮೊರೆಯಿಡುತ್ತಿದ್ದಳು.

ಅಷ್ಟರಲ್ಲಿ ದುರ್ಗಾದೇವಿಯು, "ಜ್ಞಾನದಾ!" ಎಂದು ಮಗ್ಗುಲು ಬದಲಾಯಿಸಿದಳು. ತಾಯಿಯ ಕರೆಕೇಳಿ ಥಟ್ಟನೆ ಕಣ್ಣೊರೆಸಿಕೊಂಡು ಜ್ಞಾನದಾ ಎದ್ದು ಕುಳಿತಳು.

"ಖಾಯಿಲೆಯ ದೇಹ. ಬರೀನೆಲದ ಮೇಲೇಕೆ ಮಲಗಿದ್ದೀಯೇ ಮಗು?" ಎಂದು ಹೇಳಿ ದುರ್ಗಾದೇವಿಯು ಉತ್ಕಂಠತೆ ಹಾಗೂ ಶಂಕೆಯಿಂದ ತಾನೇ ಎದ್ದು ಕುಳಿತಳು.

"ಅಯ್ಯೋ ಮಗು, ನಿನ್ನನ್ನು, ನಾನು ಹುಚ್ಚುಹುಚ್ಚಾಗಿ ಅಂದುಬಿಟ್ಟೆನೇ?" ಎಂದು ಒಡನೆಯೇ ತನ್ನ ಬಾಹುಗಳಲ್ಲಿ ಮಗಳನ್ನು ಸೇರಿಸಿಕೊಂಡು ಎದೆಗಪ್ಪಿಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದಳು.

ಅಂದು ಸಾಯಂಕಾಲ ಅಕಸ್ಮಾತ್ ಅನಾಥನಾಥನು ದುರ್ಗಾದೇವಿಯ ಕೊಠಡಿಯೊಳಕ್ಕೆ ಪ್ರವೇಶಿಸಿ ಉದಾಸಭಾವದಿಂದ, "ಈಗ ದೇಹಸ್ಥಿತಿ ಹೇಗಿದೆ

ಅತ್ತಿಗೆ? ಮಲಗಿರು - ಏಳಬೇಡ. ನೀನು ಔಷಧಿಯನ್ನು ಕುಡಿಯುವುದಿಲ್ಲ ವೆಂದು ಕೇಳಿದೆ. ಹೀಗೆ ಮಾಡಿದರೆ ಖಾಯಿಲೆ ವಾಸಿಯಾಗುವುದು ಬಹಳ ಕಷ್ಟ" ಎಂದ.

ನಿಜ. ಆ ಔಷಧಿಯನ್ನು ಕುಡಿಯದೇ ಹೋಗುವುದರಿಂದ ಯಾವ ಹಾನಿಯೂ ಆಗುತ್ತಾ ಇರಲಿಲ್ಲ. ಏಕೆಂದರೆ ಅದು ಅಂತಹ ಉತ್ತಮ ಔಷಧಿ. ದುರ್ಗಾದೇವಿಯು ಆ ಔಷಧಿಯನ್ನು ತೆಗೆದುಕೊಳ್ಳುವುದನ್ನು ಏಕಾಏಕಿ ಬಿಟ್ಟು ಬಿಟ್ಟಳು. ಅವಳಿಗೆ ಜೀವಿಸಿರಬೇಕೆಂಬ ಆಸೆಯಾಗಲಿ, ಇಚ್ಛೆಯಾಗಲಿ ಇರಲಿಲ್ಲ. ಧ್ವನಿಯು ದಿನೇ ದಿನೇ ಒಳಗೇ ಉಡುಗತೊಡಗಿತ್ತು—ಅಂತೆಯೇ ಕ್ಷೀಣವೂ ಆಗತೊಡಗಿತ್ತು. ತೀರ ಹತ್ತಿರಬಂದು ಕಿವಿಗೊಡದ ವಿನಹ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿರಲಿಲ್ಲ.

ವೈದುನ ರಾಯರ ಇಂದಿನ ಈ ಆಕಸ್ಮಿಕ ಅಭಿಮಾನ ಪ್ರದರ್ಶನವು ದುರ್ಗಾದೇವಿಯಲ್ಲಿ ಅನುಮಾನವನ್ನು ಅಂಕುರಿಸಿತು. ಆದರೂ ಸಹ ವೈದುನನ ಉಪದೇಶಕ್ಕೆ ಅವಳು ಅವ್ಯಕ್ತ ಸ್ವರದಲ್ಲಿ ಉತ್ತರವಿತ್ತಳು. ಅದನ್ನು ತಲೆತಗ್ಗಿಸಿ ಕಿವಿಗೊಟ್ಟು ಕೇಳಿ ಬಹು ಪ್ರಯಾಸದಿಂದ ಅನಾಥನಾಥನು ಅರ್ಥಮಾಡಿಕೊಂಡು, "ನೀನು ಹೇಳುವುದು ಸರಿ, ಅತ್ತಿಗೆ. ವಿಧವೆಯಾದ ಮೇಲೆ ಜೀವಿಸಿದ್ದು ಫಲವೇನು! ಹಿಂದುಗಳು ಯಾರೂ ನಿನ್ನ ಈ ಮಾತನ್ನು ಪ್ರತಿವಾದಿಸುವುದಿಲ್ಲ. ಆದರೆ ಈ ರೀತಿ ಆತ್ಮಹತ್ಯೆ ಮಾಡಿಕೊಳ್ಳುವುದು ಸರಿಯಲ್ಲ. ಎಷ್ಟು ದಿವಸ ಜೀವಿಸಿರಬೇಕೋ, ಹೇಗಾದರೂ ಆಗಲಿ, ಅಷ್ಟು ದಿವಸವಂತೂ ಜೀವಿಸಿಯೇ ತೀರಬೇಕು. ನಿನ್ನ ಈ ದೇಹಸ್ಥಿಯನ್ನು ನೋಡಿದರೆ ಲೋಕಾಭಿರಾಮವಾದ ಸಾಂಸಾರಿಕ ವಿಚಾರವನ್ನು ಹೇಳುವುದು ಸರಿಯೆನಿಸುವುದಿಲ್ಲ. ಆದರೆ ಕೆಲವು ಮಾತುಗಳಿವೆ. ಅವುಗಳನ್ನು ಹೇಳದ ವಿನಹ ಬೇರೆ ದಾರಿಯೇ ಇಲ್ಲ. ಅದಕ್ಕೆ ಹೇಳುತ್ತೇನೆ—ನೀನು ನೋಡಿಯೇ ಇದ್ದೀಯೆ-ಪ್ರಯತ್ನ ಮಾಡುವುದರಲ್ಲಿ ನಾನು ಯಾವ ತರಹ ಹಿಂದೇಟನ್ನೂ ಹಾಕಿಲ್ಲ. ಅದೇನು ದುರದೃಷ್ಟವೋ ಆ ಹುಡುಗಿಯುದು. ಯಾರೂ ಸಿಕ್ಕುವ ಹಾಗಿಲ್ಲ—ಮುಂದೆ ಬರುವ ಹಾಗಿಲ್ಲ. ಆರೇಳು ಕಡೆ ಮಾತುಕತೆಗಳಾದವು. ಎಲ್ಲಾ ಕಡೆಯೂ ಒಂದೇ ಉತ್ತರ ಬಂತು. ಹುಡುಗಿಯನ್ನು ಯಾರೂ ಒಪ್ಪುವುದಿಲ್ಲ!" ಎಂದ.

ದುರ್ಗಾದೇವಿಯು ಏನನ್ನೂ ಹೇಳಲಿಲ್ಲ. ಕೊಂಚಹೊತ್ತು ಸುಮ್ಮನಿದ್ದು, ಪುನಃ ಅನಾಥನಾಥನು, "ಅಣ್ಣ ಹೋದಾಗಿನಿಂದ ನೀನೂ ನನ್ನ ಕುಟುಂಬದವಳಾಗಿ ಬಿಟ್ಟೆಯೋ ಇಲ್ಲವೋ—ಆದರಿಂದ ಗಡಿಬಿಡಿಯಾಗಿ ಬಿಟ್ಟಿದೆ. ನೀಲಕಂಠ ಮುಖರ್ಜಿಯ ವಿಚಾರವಂತೂ ನಿನಗೆ ಗೊತ್ತೇ ಇದೆ. ಆತನೇ ಪ್ರತಿ ಮನೆಗೂ ಹೋಗಿ ಜನಗಳನ್ನು ಚಿತಾವಣೆ ಮಾಡುತ್ತಿದ್ದಾನೆ. ನಿನ್ನ ಹೆಸರು ಹೇಳಿಕೊಂಡು ಹೇಗಾದರೂ ಮಾಡಿ ನನ್ನನ್ನು ನಾಲ್ಕು ಜನರೆದುರಿಗೆ ತಲೆತಗ್ಗಿಸುವಂತೆ ಮಾಡಬೇಕೆಂದು ಟೊಂಕಕಟ್ಟಿ ನಿಂತಿದ್ದಾನೆ. ಅಲ್ಲದೆ,ನಾವುತಾನೆ ಜನಗಳಲ್ಲಿ ದೋಷ ಕಂಡು ಹಿಡಿಯುವುದಕ್ಕಾಗುತ್ತದೆಯೇ? ನಮ್ಮ ಕಣ್ಣಿಗೇ ಕಾಣುತ್ತಾ ಇದೆ ಹುಡುಗಿಯ ವಯಸ್ಸು. ನಮ್ಮ ಸಮಾಜವು ನಿಶ್ಚಯಿಸಿಟ್ಟಿರುವ ಮದುವೆಯ ವಯಸ್ಸಿಗಿಂತ ಹೆಚ್ಚಾಗಿ ಆಗಿರುವುದು ತಿಳಿದ ವಿಷಯವೇ. ಪಟ್ಟಣ ವಾಸದಲ್ಲಿಯಾದರೆ ಯಾರೂ ಇದನ್ನು ಕೇಳುವುದಿಲ್ಲ. ಆದರೆ ಹಳ್ಳಿಗಳ ಕಡೆ ಇದೆಯಲ್ಲ ಈ ಸುಡುಗಾಡು ಜನಗಳ ಪೀಕಲಾಟ!" ಎಂದು ಒಂದು ದೀರ್ಘಶ್ವಾಸ ಬಿಟ್ಟನು.

ಮೈದುನ ದೇವರು ಈ ಹೊಸ ಜಾಲವನ್ನು ರಚಿಸಿರುವ ಬಗೆಯನ್ನು, ಅದರ ಆಳವನ್ನು—ಅದು ಎಲ್ಲಿಗೆ ಕೊನೆ ಮುಟ್ಟೀತೆಂಬುದನ್ನು ದುರ್ಗಾದೇವಿಯು ತಿಳಿಯಲಾರದೆ ಸುಮ್ಮನೆ ನೋಡುತ್ತ ಕುಳಿತಿದ್ದಳು. ಆದರೂ ಅವಳ ಮುಖದಲ್ಲಿ ಒಂದು ಅನಿಶ್ಚಿತ ಶಂಕೆಯ ಛಾಯೆಯು ಸ್ಪಷ್ಟವಾಗಿ ಕಂಡಿತು.

ಒಂದುಸಲ ತೀವ್ರವಾಗಿ ಅಲ್ಲಿ ಇಲ್ಲಿ ನೋಡಿ ಅನಾಥನಾಥನು ತಾನು ಹೇಳಬೇಕೆಂದು ಬಂದಿದ್ದ ವಾಸ್ತವಾಂಶವನ್ನು ಮುಂದಿಟ್ಟನು. "ಈಗಿರುವ ಸ್ಥಿತಿಯಲ್ಲಿ ನಿನ್ನಿಂದ ಅಲ್ಲಿ ಇಲ್ಲಿ ಹೋಗಿಬರಲು ಸಾಧ್ಯವಿಲ್ಲ. ಹೋಗೆಂದು ನಾನು ಹೇಳುವುದೂ ಇಲ್ಲ. ನಿನಗೂ ಗೊತ್ತಿದೆ, ಅತ್ತಿಗೆ. ನನ್ನ ಮಗಳೂ ಮದುವೆಗೆ ಬೆಳೆದು ನಿಂತಿದ್ದಾಳೆ. ಅವಳ ಮದುವೆಯನ್ನೂ ಈಗ ಮಾಡಬೇಕಾಗಿದೆ. ಆದರಿಂದಲೇ ನಾನು—ಎಲ್ಲಾ ಕಡೆಯೂ ಕಣ್ಣಿಟ್ಟುಕೊಂಡು ಮುಂದೆ ಹೋಗಬೇಕಾಗಿದೆ - ಆದಕ್ಕೇನೆ ಜ್ಞಾನುವನ್ನು ಬೇರೆಲ್ಲಿಗಾದರೂ ಕಳುಹಿಸಬೇಕು. ಅದು ಮಾಡದ ವಿನಹ ಯಾವ ಕೆಲಸಗಳೂ ಜರುಗುವ ಹಾಗಿಲ್ಲ. ಅವಳು ಈ ಮನೆಯಲ್ಲಿರುವುದರಿಂದ ಊರಿನ ಜನಗಳು ಎಂತಹ

ಅಡ್ಡಿ ತಂದುಬಿಡುತ್ತಾರೆ ಅಂವರೆ ಅವರಿಂದ ನನ್ನ ಮಗಳ ಮದುವೆಗೆ ಸಹ ಬಹಳ ತೊಡಕುಗಳುಂಟಾಗಿ ಬಿಡುತ್ತೆ!"

"ಜ್ಞಾನು ಎಲ್ಲಿಗೆ ಹೋಗುತ್ತಾಳಪ್ಪ?" ದುರ್ಗಾದೇವಿಯ ಸ್ವರವು ತುಟಿಗಳೊಳಗೇ ಲೀನವಾದಂತೆ ಭಾಸವಾಯಿತು.

"ಅಲ್ಲಿಯವರೆಗೆ ಹರಿಪಾಲಪುರಕ್ಕೇ ಹೋಗಿರಲಿ."

"ಅಲ್ಲಿಗೆ ಹೇಗೆ ಹೋಗುತ್ತಾಳೆ? ಹೋಗಿ ಆಗುವುದಾದರೂ ಏನು?"

ಅನಾಥನಾಥನ ಕೋಪವೇರಿಬಂತು. "ನೀನು ಹೀಗೆ ಮಾತನಾಡುವುದು ಅನ್ಯಾಯ, ಅತ್ತಿಗೆ! ಬರೀ ನಿಮ್ಮ ಒಳ್ಳೆಯದು ಕೆಟ್ಟದ್ದನ್ನು ನೋಡಿಕೊಂಡರೆ ಸಾಲದು. ಯಾರ ಮನೆಯಲ್ಲಿ, ಯಾರ ಆಶ್ರಯದಲ್ಲಿ, ಯಾರು ನಿನ್ನ ಕೆಟ್ಟಕಾಲದಲ್ಲಿ ನಿನಗೆ ಆದರೋ, ನಿನ್ನನ್ನು ಕುಟುಂಬದಲ್ಲಿ ಸೇರಿಸಿಕೊಂಡರೋ, ಅವರ ಒಳ್ಳೆಯದನ್ನು ಕೆಟ್ಟದ್ದನ್ನು ನೀನು ನೋಡಬೇಕಾದುದು ನಿನ್ನ ಧರ್ಮ!"

ದುರ್ಗಾದೇವಿಗೆ ಇದರ ಪ್ರತ್ಯುತ್ತರವನ್ನು ಕೊಡಲು ಸಾಧ್ಯವಾಗಲಿಲ್ಲ. ಕೇವಲ ಒಂದು ನಿಟ್ಟುಸಿರುಬಿಟ್ಟು ಸುಮ್ಮನಾದಳು. ಈ ನಿಟ್ಟುಸಿರಿನ ಪರಿಣಾಮ ಅನಾಥನಾಥನ ಮೇಲೆ ಏನೂ ಆಗದಿದ್ದರೂ ಅವನ ಧ್ವನಿಯು ಕೊಂಚ ಕಡಿಮೆಯಾಯಿತು. "ಈ ಅವಸ್ಥೆಯಲ್ಲಿ ಮಗಳನ್ನು ಕಳುಹಿಸಿಕೊಡುವುದಕ್ಕೆ ನಿನಗೆ ಬಹಳ ಕಷ್ಟವಾಗುತ್ತದೆ. ಅದು ನನಗೆ ಗೊತ್ತಿದೆ. ಆದರೆ ಬೇರೆ ಉಪಾಯವೇನಿದೆ? ಅತ್ತಿಗೆ! ನಿಜವಾಗಿಯೂ ಇದರಲ್ಲಿ ನಿನ್ನದೇ ತಪ್ಪು. ನಾನು ನಿಮ್ಮಣ್ಣನಿಗೂ ಜ್ಞಾನು ಮದುವೆಯ ವಿಚಾರದಲ್ಲಿ ಕಾಗದ ಬರೆದಿದ್ದೆ. ಹರಿಪಾಲಪುರದಲ್ಲಿಯೇ ಲಗ್ನ ನಿಶ್ಚಯ ಮಾಡಿದ್ದನಂತೆ. ನೀನೆ ಯಾವುದೋ ಸಾಧ್ಯವಿಲ್ಲದ ಆಸೆಯಿಟ್ಟುಕೊಂಡು ಜಗಳವಾಡಿ, ರಗಳೆ ರಾದ್ಧಾಂತ ಮಾಡಿ ಬೇಡ ಬೇಡವೆಂದರೂ ಹುಡುಗಿಯನ್ನು ಕರೆದುಕೊಂಡು ಬಂದುಬಿಟ್ಟೆಯಂತೆ. ಹಾಗಂತ ಅವನು ಕಾಗದ ಬರೆದದ್ದರಿಂದಲೆ ನನಗೂ ಗೊತ್ತಾದುದು. ನೀನು ಹಾಗೆ ಮಾಡದೆ ಇದ್ದಿದ್ದರೆ ಇಂದು ಆನಂದದಿಂದ—

ಆನಂದದಿಂದ ಏನಾಗುತ್ತಿತ್ತು ಎಂಬುದನ್ನು ಅನಾಥಬಾಬುವು ಬಿಚ್ಚಿ ಹೇಳಲಿಲ್ಲ. ಆದರೆ ದುರ್ಗಾದೇವಿಯು ಆ ರಹಸ್ಯವನ್ನು ಚೆನ್ನಾಗಿ ತಿಳಿದು

ಕೊಂಡಳು. ಈ ಸ್ವಾರ್ಥಿಯು–ಪರರ ಕೈಬೊಂಬೆಯು, ಇದ್ದಕಿದ್ದಹಾಗೆಯೇ ಜ್ಞಾನದೆಯನ್ನು ಊರಿಗೆ ಕಳುಹಿಸುವ ನೆಪಮಾಡಿಕೊಂಡು ಏಕೆ ಬಂಧಿರುವ ನೆಂದೂ ಗೊತ್ತಾಯಿತು.

ತನ್ನ ಮೇಲೆ ಯಾವ ಭಾರವನ್ನೂ ವಹಿಸಿಕೊಳ್ಳದೆ, ಎಲ್ಲ ತರಹ ತೊಂದರೆಗಳಿಂದಲೂ ದೂರನಾಗಿದ್ದು, ಒಂದು ಕಾಸನ್ನೂ ಖರ್ಚುಮಾಡದೆ, ಅಣ್ಣನ ಮಗಳ ಲಗ್ನದ ಜವಾಬ್ದಾರಿಯನ್ನು ಬೇರೆಯವರ ಮೇಲೆ ತಳ್ಳಬಹು ದಾದ ಅವಕಾಶ, ಸುಯೋಗಗಳು ದೊರೆತರೆ ಅದನ್ನು ಕಳೆದುಕೊಳ್ಳುವ ಬುದ್ಧಿ ಹೀನನೆ ಅನಾಥನಾಥ? ಎಂದಿಗೂ ಇಲ್ಲ.

ಅನಾಥನಾಥನು ಹೊರಟು ಹೋದಮೇಲೆ ತನ್ನ ಕೆಲಸ ಕಾರ್ಯ ಗಳನ್ನು ಮುಗಿಸಿಕೊಂಡು ಜ್ಞಾನದಾ ತಾಯಿಯ ಬಳಿಗೆ ಬಂದಳು. ತಾಯಿಯು ಸ್ಥಿತಿಯನ್ನು ನೋಡಿ ಬೆಚ್ಚಿದಳು. ದುರ್ಗಾದೇವಿಯ ಕಣ್ಣುಗುಣಿಯಲ್ಲಿ ಹುದುಗಿದ್ದ ರಕ್ತಶೂನ್ಯ ಕಣ್ಣುಗಳು ಕೆಂಪಗೆ ಊದಿಕೊಂಡಿದ್ದವು.

ಮಗಳನ್ನು ನೋಡುತ್ತಲೇ ಅವಳ ಅಳುವು ಸಹಸ್ರಮುಖವಾಯಿತು. ಸನ್ನೆಮಾಡಿ ಮಗಳನ್ನು ಹತ್ತಿರ ಕರೆದು ಅವಳ ಎದೆಯ ಮೇಲೆ ತಲೆಯಿಟ್ಟು ಆ ತಾಯಿಯು ಇಂದು ಎಳೆ ಮಗುವಿನಂತೆ ಅತ್ತಳು.

ಬಹಳ ಹೊತ್ತು ಕಳೆದಮೇಲೆ, ಅಳುವಿನ ವೇಗ ಕಡಿಮೆಯಾಗಿ, ಮನಸ್ಸು ಕೊಂಚ ಶಾಂತವಾದಾಗ ಮಗಳು, "ನನ್ನ ಸ್ವಭಾವ ನಿನಗೆ ಗೊತ್ತಿದ್ದರೂ ನನ್ನನ್ನು ನಿನ್ನಿಂದ ಅಗಲಿಸುವರೆಂದು ಇಷ್ಟೊಂದು ಯೋಚಿಸುವೆಯಲ್ಲ. ಅಮ್ಮಾ, ನಿನ್ನಿಂದ ನನ್ನನ್ನು ಈ ಪ್ರಪಂಚದಲ್ಲಿ ಯಾರೂ ಅಗಲಿಸಲಾರರು. ಇದೇನು ಚಿಕ್ಕಪ್ಪನ ಮನೆಯಲ್ಲ. ನನ್ನ ತಂದೆಯವರ ಮನೆ, ನಿನ್ನ ಮನೆ. ಚಿಕ್ಕಪ್ಪ ಅನ್ನಹಾಕದಿರಬಹುದು. ಹಾಗೆ ಮಾಡಿದರೆ ನಾನೂ ನಾಚಿಕೆ ಗೇಚಿಕೆಗೆ ತಿಲಾಂಜಲಿ ಕೊಟ್ಟುಬಿಡುತ್ತೇನೆ. ಹೇಗಾದರೂ ಸರಿ—ಕೂಲಿನಾಲಿ ಮಾಡಿಯಾದರೂ ಸರಿ ನಿನ್ನ ಪೋಷಣೆ ಮಾಡುತ್ತೇನೆ. ಅಮ್ಮಾ! ಅಷ್ಟು ಧೈರ್ಯ ನನ್ನಲ್ಲಿದೆ, ಶಕ್ತಿ ನನ್ನಲ್ಲಿದೆ, ನಾನು ಮಾಡಲೂ ಬಲ್ಲೆ!" ಎಂದಳು.

ಈ ಮಾತುಗಳನ್ನು ಆಡಿ ಮಗಳು ತಾಯಿಯಾದಳು. ತಾಯಿಯನ್ನು ಒಂದು ಸಣ್ಣಹುಡುಗಿಯಂತೆ ತೊಡೆಯ ಮೇಲೆ ಮಲಗಿಸಿಕೊಂಡು ಜ್ಞಾನದಾ

ಕುಳಿತಿದ್ದಳು. ಕೊಂಚ ಹೊತ್ತಾದ ಮೇಲೆ ಆಯಾಸವಾಗಿದ್ದುದರಿಂದ, ಶಿಥಿಲ ಶರೀರವಾದ್ದರಿಂದ ದುರ್ಗಾದೇವಿಗೆ ಸಹಜವಾಗಿ ನಿದ್ದೆ ಬಂತು. ಆದರೆ ಆ ಹೆಣ್ಣುಮಗಳು ಮಾತ್ರ ಬಹಳ ಹೊತ್ತಿನವರೆಗೂ ಎದ್ದೇ ಇದ್ದಳು. ಚಿಕ್ಕಪ್ಪನು ದೂರಮಾಡಿಬಿಟ್ಟರೆ, ಯಾರಲ್ಲಿ ಯಾವ ತರಹ ಕೆಲಸಮಾಡಿ ಹೊಟ್ಟೆ ಹೊರೆದುಕೊಳ್ಳಬೇಕು—ಆ ಕಷ್ಟಕಾಲದಲ್ಲಿ—ಆ ದುರ್ದಶೆಯಲ್ಲಿ ಸಹಾಯಮಾಡುವವರು ಯಾರು ಎಂಬುದನ್ನು ಎಷ್ಟು ಯೋಚಿಸಿದರೂ ಅವಳಿಗೆ ಬಗೆಹರಿಯಲೇ ಇಲ್ಲ.

ಜ್ಞಾನದೆಯನ್ನು ಮನೆಯಿಂದ ಹೊರಡಿಸಿ ಹರಿಪಾಲಪುರಕ್ಕೆ ಕಳುಹಿಸಿ ಬಿಡಬೇಕೆಂಬ ಪ್ರಸ್ತಾಪವು ಕಿರಿಯಸೊಸೆಯ ಕಿವಿಗೆ ಬಿತ್ತು. ಅವಳು ಕೂಡಲೇ ಗಂಡನನ್ನು ಏಕಾಂತವಾಗಿ ಕರೆದು, "ನಿಮಗೆ ಬುದ್ಧಿ ಕೆಟ್ಟಿಲ್ಲ ತಾನೆ? ನಿಮ್ಮ ಹಿರಿಯತ್ತಿಗೆಯ ಮಾತು ಕೇಳಿಕೊಂಡು, ಅಕಾಲದಲ್ಲಿ ರೋಗಗ್ರಸ್ತ ತಾಯಿಯಿಂದ ಆ ಹುಡುಗಿಯನ್ನು ಅಗಲಿಸುತ್ತೀನಿ ಅಂತ ಹೋಗಿ ಹೇಳಿ ಬಂದಿದ್ದೀರಲ್ಲ. ಹಗಲು ರಾತ್ರಿ ಕೊಲ್ಲುವ ಕೆಲಸದಲ್ಲಿರುವ ಕಟುಕನಾದರೂ ವಾಸಿ—ನಿಮಗಿಂತ ಹೆಚ್ಚು ದಯಾ ದಾಕ್ಷಿಣ್ಯ ಅವನಲ್ಲಿರುತ್ತೆ" ಎಂದಳು,

ಏನೇ ಆಗಲಿ ಈ ಕೆಲಸ ಒಮ್ಮೆಲೇ ಮಾಡುವುದು ದುಸ್ಸಾಧ್ಯವಾಗಿತ್ತು. ಅದನ್ನು ಕಂಡುಕೊಂಡೇ ಅನಾಥನಾಥನೂ ಸುಮ್ಮನಾಗಿ ಬಿಟ್ಟ. ಅಷ್ಟೆ! ಈ ವಿಚಾರದಲ್ಲಿ ಅವನೆಲ್ಲಿಯಾದರೂ ಹೆಂಡತಿಯ ಮಾತು ಕೇಳುವನೇ! ಹೆಂಡತಿಯ ಮಾತು ಕೇಳುವವನೆಂದು ಅವನನ್ನು ದೋಷಾರೋಪಣೆ ಮಾಡಿ ಯಾರಾದರೂ ಬದುಕಿಯಾರೆ!

ಇತ್ತ ಸ್ವಾಭಿಮಾನಿಯಾದ ದುರ್ಗಾದೇವಿಯು ಸಹ, ತಲೆಯ ಮೇಲೆಯೇ ಮೃತ್ಯುವು ತಾಂಡವವಾಡುತ್ತಿದ್ದರೂ ಕೂಡ, ಮಗಳನ್ನು ಕರೆದುಕೊಂಡು ಹರಿಪಾಲಪುರಕ್ಕೆ ಹೊರಟು ಬಿಡುವಂತಹವಳೇ! ಆದರೆ ಐದಾರು ಮಕ್ಕಳ ತಾಯಿಯಾದ ಹೆಂಡತಿಯನ್ನು ತುಂಬಿದ ಗರ್ಭಿಣಿಯಾಗಿರುವಾಗ ಹೊಟ್ಟೆಯ ಮೇಲೆ ಹೊಡೆದು ಭವಬಂಧನದಿಂದ ಮುಕ್ತಮಾಡಿದ್ದ ಆ ಸುಪಾತ್ರನಿರುವುದನ್ನು ಸ್ಮರಿಸುತ್ತಲೇ ಅವಳ ಹೃದಯವು ನಡುಗಿಬಿಟ್ಟಿತು.

ಮಾರನೆಯ ದಿನ ದುರ್ಗಾದೇವಿಯು ಅನಾಥನಾಥನನ್ನು ಹೇಳಿ ಕರೆಯಿಸಿಕೊಂಡಳು. ಅವನೆರಡೂ ಕೈಗಳನ್ನೂ ತನ್ನ ಕೈಯಲ್ಲಿಟ್ಟುಕೊಂಡು

ಅವಳು, "ವಯಸ್ಸಿನಲ್ಲಿ ನೀನು ಚಿಕ್ಕವನಿರಬಹುದು, ನಾನು ದೊಡ್ಡವಳಿರಬಹುದು. ಆದರೂ ನಿನ್ನ ಕಾಲಿಗೆ ಬಿದ್ದು ಭಿಕ್ಷೆ ಬೇಡುತ್ತೇನೆ. ನಿನಗೆ ಯಾರೊಡನೆ ಇಷ್ಟಬಂದರೆ ಅವರೊಡನೆ ಹುಡುಗಿಯ ಲಗ್ನಮಾಡಿ ಬಿಡು. ಆದರೆ ಈ ಅಂತ್ಯಕಾಲದಲ್ಲಿ ಅಗಲಿಸಬೇಡ" ಎಂದು ಮೊರೆಯಿಟ್ಟು ಜ್ಞಾನದೆಯ ಕೈಯನ್ನು ಎತ್ತಿ ಅವಳ ಚಿಕ್ಕಪ್ಪನ ಕೈಯಲ್ಲಿಟ್ಟಳು.

ಅನಾಥನಾಥನು ತನ್ನ ಕೈಗಳನ್ನು ಎಳೆದುಕೊಂಡ. "ಬೇರೆಯವರ ಕಾರಣದಿಂದ ನಾನು ಸಮಾಜದಲ್ಲಿ ಬಹಿಷ್ಕೃತನಾಗಬೇಕಾಗಿಬಂತು. ನಾನೇನು ಇವಳ ಮದುವೆಗೆ ಪ್ರಯತ್ನಿಸುತ್ತೇನೆಂದು ಮಾತು ಕೊಟ್ಟಿದ್ದೇನೇನು! ನಾನೇನು ಮಾಡಲಿ? ಚಟ್ಟದ ಮೇಲಿರುವ ಹೆಣವು ಕೂಡ ನಿನ್ನ ಮಗಳನ್ನು ಮದುವೆಯಾಗಲು ಒಪ್ಪುವುದಿಲ್ಲ!—ಒಳ್ಳೆಯದು ನಿನ್ನ ಕೈಗಳಲ್ಲಿದ್ದ ಆ ಒಂದು ಜೊತೆ ಬಂಗಾರದ ಬಳೆಯೆಲ್ಲಿ?"

"ಅದು ಅವರ ಹದಿಮೂರನೇ ದಿವಸವೇ ಮಾರಿದ್ದಾಯಿತಪ್ಪ! ಇನ್ನೆಲ್ಲಿದೆ?"

ಅನಾಥನಾಥನು ಕೈಯಲ್ಲಾಡಿಸಿ, "ಸರಿ, ಹಾಗಾದರೆ ನಾನೇನು ಮಾಡುವುದಕ್ಕೆ ಆಗುತ್ತೆ? ಕೈಯಿಂದ ಒಂದು ಕಾಸೂ ಬಿಚ್ಚುವುದಿಲ್ಲ. ಹುಡುಗಿಯನ್ನು ಬಿಡುವುದಿಲ್ಲ. ಅಂದರೆ ನನ್ನ ತಲೆಯಮೇಲೆ ಪೆಟ್ಟಿ ನನ್ನನ್ನು ನಗುಪಾಟಲಿಗೆ ಈಡುಮಾಡಬೇಕು—ನನ್ನನ್ನು ಮುಳುಗಿಸಬೇಕೆಂತ ಇಷ್ಟಪಡುತ್ತೀರಿ ಅಂತ ಚೆನ್ನಾಗಿ ಗೊತ್ತಾಗುತ್ತೆ! ಇನ್ನೇನು?" ಎಂದು ಕ್ರೋಧದಿಂದ ಮುಖ ಊದಿಸಿಕೊಂಡು ಹೊರಟುಹೋದ.

ಅವನು ಹೊರಟುಹೋದ ಸ್ವಲ್ಪ ಹೊತ್ತಿನವರೆಗೆ ದುರ್ಗಾದೇವಿಯು ಸುಮ್ಮನೆ ಸ್ಥಿರವಾಗಿ ಕುಳಿತಿದ್ದಳು. ನಂತರ ಇದ್ದಕ್ಕಿದಂತೆಯೇ ಮಗಳ ಕೈಹಿಡಿದು ಜೋರಾಗಿ ಎಳೆದು, "ಕುಳಿತಿದ್ದೀಯಲ್ಲೇ ದೆವ್ವನಹಾಗೆ! ಕತ್ತಲಾಯಿತು. ಇನ್ನೂ ದೀಪ ಹಚ್ಚುವುದಿಲ್ಲವೇನು?" ಎಂದಳು.

ಇದುವರೆಗೂ ನಡೆದ ಆಲೋಚನೆಗಳು ಜ್ಞಾನದೆಯನ್ನು ಇರಿದು ಬಿಟ್ಟಿತು. ಅದರ ಪೆಟ್ಟಿನಿಂದ ನೊಂದವಳಾಗಿ ಅವಳು ಅನ್ಯಮನಸ್ಕಳಾಗಿ ಕುಳಿತಿದ್ದಳು.

ಅವಳು ಉತ್ತರ ಹೇಳುವ ಮುನ್ನವೇ ತಾಯಿಯು ಅತ್ಯಂತ ಕಟುವಾಗಿ, "ಸಾವಾದರೂ ಬರುವುದಿಲ್ಲ! ರಾಜಕುಮಾರಿಯ ಹಾಗೆ ತಲೆಯೆತ್ತಿಕೊಂಡು ಕುಳಿತಿದೆ! ಇಷ್ಟೊಂದು ಬೈಗಳು ಧಿಃಕಾರಗಳನ್ನು ಕೇಳಿಯೂ ನಿನ್ನ ಪ್ರಾಣ ಏಕೆ ಹಾರಿಹೋಗುವುದಿಲ್ಲ? ಯದುಘೋಷಾಲನ ಮುತ್ತಿನಂತಹ ಮಗ ಮೂರು ದಿನ ಜ್ವರ ಬಂದದ್ದೇ ಹೋಗಿಯೇ ಬಿಟ್ಟ. ಆದರೆ ನಿನಗೊಂದು ವರುಷದಿಂದ ಬಿಡದೆ ಜ್ವರ ಬರುತ್ತಿದೆ. ಆದರೆ ಯಮಧರ್ಮನೂ ನಿನ್ನಿಂದ ಸೋತು ಹೋದ! ನೀನು ನಾಚಿಕೆಗೆಟ್ಟವಳಾದ್ದರಿಂದಲೇ ಇನ್ನೂ ಮುಖ ತೋರಿಸಿಕೊಂಡು ಬದುಕಿದ್ದಿ! ಇನ್ಯಾವುದಾದರೂ ಹುಡುಗಿಯಾಗಿದ್ದರೆ ನಾಚಿಕೆಯಿಂದ ನದಿಯಲ್ಲೋ ನಾಲೆಯಲ್ಲೋ ಬಿದ್ದು ಪ್ರಾಣಬಿಟ್ಟು ಬಿಡುತ್ತಿದ್ದಳು! ಹೋಗೆ ಹೋಗು. ನನ್ನ ಕಣ್ಣೆದುರಿಗಿರಬೇಡ. ಹೋಗೆ........ದೆವ್ವ ಹೋಗು. ಒಂದು ಕ್ಷಣವಾದರೂ ಆರಾಮಾಗಿ ಕುಳಿತುಕೊಂಡೇನು? ಹಗಲು ರಾತ್ರಿ ಹಾಳಾದ್ದು ಜಿಗಣೆಯ ಹಾಗೆ ಅಂಟಿಕೊಂಡೇ ಇರುತ್ತೀಯಲ್ಲ!"

ಹುಡುಗಿಯನ್ನು ನೂಕಿ ತಾಯಿಯು ಮಗ್ನಳಾದಳು.

ಖಂಡಿತವಾಗಿಯೂ ತಾಯಿಯ ಮಾತು ನಿಜ. ಬೇರೆ ಯಾರಾದರೂ ಆಗಿದ್ದಿದ್ದರೆ ತಿರಸ್ಕಾರದಿಂದ, ನಾಚಿಕೆಯಿಂದ, ಆತ್ಮಹತ್ಯೆ ಮಾಡಿಕೊಂಡು ಬಿಡುತ್ತಿದ್ದರು. ಹೀಗೆಷ್ಟೋ ಮಂದಿ ಹುಡುಗಿಯರು ಮಾಡಿಕೊಂಡೂ ಇದ್ದಾರೆ. ಆದರೆ ಯಾವ ಗೂಢ ಕಾರಣದಿಂದಲೋ ಗೊತ್ತಿಲ್ಲ; ಈ ಹುಡುಗಿಯನ್ನು ಭಗವಂತನು ಭೂಮಾತೆಯಂತೆಯೇ ಸಹನಶೀಲೆಯನ್ನು ಮಾಡಿ ಕೂಡಿಸಿದ್ದಾನೆ.

ಜ್ಞಾನದಾ ಎದ್ದು ಕೆಲಸಕಾರ್ಯಗಳನ್ನು ಮಾಡಲು ಎದ್ದಳು.

ಇಷ್ಟೊಂದು ಲಾಂಛನ, ಅಪಮಾನವಾದರೂ ಕೇವಲ ಒಂದು ಕ್ಷಣ ಮಾತ್ರ ಆತ್ಮವಿಸ್ಮೃತಳಾಗಿ ಜ್ಞಾನದಾ ಇಷ್ಟು ಮಾತ್ರ ಹೇಳಿದಳು— "ಅಮ್ಮಾ ನನಗೆ ಪ್ರಾಣಬಿಡುವುದಕ್ಕೆ ಬರುತ್ತದೆ. ಕೇವಲ ನಿನ್ನ ಕಷ್ಟವನ್ನು ಮನಗಂಡು ಸಹಿಸುತ್ತ ಬದುಕಿದ್ದೇನೆ."

ದೀಪ ಹಚ್ಚಿ, ಇನ್ನೊಂದು ಸಣ್ಣದೀಪವನ್ನು ಕೈಯಲ್ಲಿ ಹಿಡಿದುಕೊಂಡು ಜ್ಞಾನದೆಯು ತುಳಸೀಕಟ್ಟೆಯ ಬಳಿಹೋದಳು. ಹಿಂದೂ ಹೆಣ್ಣುಮಕ್ಕಳ

ಬಾಲ್ಯದಿಂದ ಈ ಗಿಡವನ್ನು ದೇವತಾಸ್ವರೂಪವೆಂದು ಪೂಜಿಸಲು ಕಲಿಯುತ್ತಾರೆ.

ತುಳಸೀಕಟ್ಟೆಯ ಎದುರಿಗೆ ಬಂದು ಜ್ಞಾನದಾ ನಿಂತಳು. ತನ್ನನ್ನು ಸಮಾಧಾನ ಮಾಡಿಕೊಳ್ಳಲಾರದಾದಳು. ಶಿರಗನ್ನು ಹೆಗಲಮೇಲೆ ಹಾಕಿಕೊಂಡು ಅವಳು ಪ್ರಣಾಮ ಮಾಡಿದಳು. ಅವಳಿಂದ ಮೇಲಕ್ಕೇಳಲಾಗಲಿಲ್ಲ. ಎರಡೂ ಕೈಗಳನ್ನೂ ಮುಂದೆ ಚಾಚಿ ಅಳುತ್ತಾ ಸಾಷ್ಟಾಂಗ ಪ್ರಣಾಮವನ್ನು ಮಾಡಿದವಳು ಭೂತಲದಲ್ಲಿಯೇ ಮಲಗಿದ್ದಳು.

"ಹೇ ದೇವರೇ! ದಯಾಮಯ! ಇದೇಸ್ಥಳದಲ್ಲಿ ನೀನು ನನ್ನ ತಂದೆಯುವರಿಗೆ ನಿನ್ನ ಚರಣಗಳಲ್ಲಿ ಸ್ಥಾನಕೊಟ್ಟೆ. ಈಗ ನನ್ನನ್ನೂ, ನನ್ನ ದುಃಖಿತ ತಾಯಿಯನ್ನೂ ನಿನ್ನ ಗರ್ಭವಾಸದಲ್ಲಿ ಸೇರಿಸಿಕೊಂಡು ನನ್ನ ತಂದೆಯುವರ ಬಳಿಗೆ ಕಳುಹಿಸಿಬಿಡು! ಸಹಿಸಿಯಾಯಿತು. ಇನ್ನೂ ಹೆಚ್ಚಿಗೆ ನಮ್ಮಿಂದ ಸಹಿಸಲು ಸಾಧ್ಯವಾಗುವ ಹಾಗಿಲ್ಲ!"

೯

ಚೈತ್ರಮಾಸದ ಅಂತ್ಯದಿನಗಳು ಚೆನ್ನಾಗಿಲ್ಲದಿದ್ದುದರಿಂದ ಕಿರಿಯ ಸೊಸೆಯು ತವರುಮನೆಗೆ ಹೋಗಲಿಲ್ಲ. ಈ ತಿಂಗಳು ಕಳೆದ ಒಡನೆಯೇ ಅವಳನ್ನೂ ಅವಳ ಮಗಳನ್ನೂ ಕರೆದುಕೊಂಡು ಹೋಗಬೇಕೆಂದು ಅವಳ ತಮ್ಮನು ಬಂದನು.

ಇಂದು ಒಳ್ಳೆಯದಿನ. ಊಟವಾದಮೇಲೆ, ಮಧ್ಯಾಹ್ನ, ಹೊರಡುವ ಮುಹೂರ್ತ ಗೊತ್ತುಮಾಡಲಾಗಿತ್ತು,

ಈ ಸಮಯದಲ್ಲಿ ಅದೇಕೋ ಅತುಲನೂ ಊರಿಗೆ ಬಂದಿದ್ದ. ಸ್ವರ್ಣಮಂಜರಿಯು ಅವನನ್ನು ಇಂದು ಊಟಕ್ಕೆ ಆಮಂತ್ರಿಸಿದ್ದಳು.

ಅಂದು ಮಧ್ಯಾಹ್ನ. ಅತುಲ, ಮಾಧುರಿಯ ಮಾವ ಇಬ್ಬರೂ ಊಟಕ್ಕೆ ಕುಳಿತಿದ್ದರು. ಸ್ವರ್ಣಮಂಜರಿಯು ಹತ್ತಿರ ಕುಳಿತುಕೊಂಡು ಅವರಿಗೆ ಉಪಚಾರಮಾಡುತ್ತಿದ್ದಳು.

ಅದೇಕೋ ಸ್ವರ್ಣಮಂಜರಿಯು ಮೈಮರೆತು ಬಡಿಸುವ ಕೆಲಸವನ್ನು ಮಾಧುರಿಗೆ ಒಪ್ಪಿಸಿದ್ದಳು. ಬೆಳಗ್ಗೆ ಅಷ್ಟು ಹೊತ್ತಿನಿಂದಲೇ ಅಡಿಗೆಯ

ನ್ನೆಲ್ಲಾ ಒಳಗೊಳಗೇ ಜ್ಞಾನದಾ ಕೈಯಿಂದಲೇ ಮಾಡಿಸಲಾಗಿತ್ತು. ಹೊರ ಗಡೆಯವರಾರಾದರೂ ಈ ವಿಚಾರವೆತ್ತಿದರೆ ಸ್ವರ್ಣಮಂಜರಿಯು ನಿಸ್ಸಂಕೋಚವಾಗಿ ಸುಳ್ಳುಹೇಳಿ ಬಿಡುತ್ತಿದ್ದಳು. "ಬಹಳ ಚೆನ್ನಾಗಿದೆ! ನಾವು ಆ ಹುಡುಗಿಗೆ ಅಡಿಗೆಯ ಮನೆಯಲ್ಲಿ ಕಾಲಿಡಲು ಸಹ ಬಿಡುವುದಿಲ್ಲ."

ಆದರಿಂದಲೇ ಊಟಕ್ಕೆ ಬಡಿಸುವುದಕ್ಕೆ ಜ್ಞಾನದೆಯನ್ನು ನಿಷೇಧಿಸಲಾಗಿತ್ತು. ಅಲ್ಲದೆ ಆವಳೇ ನಾಚಿಕೆಯಿಂದ ಯಾರ ಮುಂದೆಯೂ ಬರುತ್ತಲೂ ಇರಲಿಲ್ಲ. ಎಷ್ಟು ಸಾಧ್ಯವೋ ಅಷ್ಟು ಅವಳು ಜನಗಳಿಂದ, – ಮನೆಯವರಾದರೂ ಸರಿ, ಹೊರಗಿನವರಾದರೂ ಸರಿ – ಮರೆಯಾಗಿಯೇ ಇರುತ್ತಿದ್ದಳು.

ಅತುಲ ಮಾಧುರಿಯರ ವಿವಾಹವಾಗುವದಿತ್ತು. ಆದರಿಂದ ಆ ಸರ್ವಾಂಗ ಸುಂದರಿಯು ಶರೀರವನ್ನೆಲ್ಲ ಚೆನ್ನಾಗಿ ಶೃಂಗರಿಸಿಕೊಂಡು, ನಾಚಿಕೆಯಿಂದ ಭೂಮಿಗಿಳಿದು ನಡುಗುವ ಕೈಯಿಂದ ಅತುಲನಿಗೆ ಬಡಿಸಲು ಹೋಗಿ ತಪ್ಪಿನ ಮೇಲೆ ತಪ್ಪುಮಾಡುತ್ತಿದ್ದಳು. ಆವಳ ದೊಡ್ಡಮ್ಮ ಸ್ವರ್ಣ ಮಂಜರಿಯು ಸ್ನೇಹದಿಂದ ಉಪದೇಶಕೊಡುವ ಸ್ವರದಲ್ಲಿ ಆಗಾಗ್ಗೆ, "ಅಭಾಗಿ", "ಪೆಚ್ಚಿ", "ಪುಕ್ಕಲಿ" ಮುಂತಾಗಿ ಅಂದುಕೊಂಡು, ಆಗಾಗ ನಗುತ್ತಾ ಆ ತಪ್ಪಿನ ಆಂತರಾರ್ಥವನ್ನು–ಅಂದರೆ ಕಾರಣವನ್ನು ಶೋಧಿಸುತ್ತಾ, ತಮಾಷೆಮಾಡುತ್ತಾ — ಮಾಧುರಿಯ ಬಡಿಸುವ ಅಯೋಗ್ಯತೆಯನ್ನು ಹುಡುಗಾಟಕ್ಕೆ ತಿರುಗಿಸಿ ಆ ಹುಡುಗಿಯನ್ನು ಆಕ್ಷೇಪಣೆಯಿಂದ ಉಳಿಸಿ ಬಿಡುತ್ತಿದ್ದಳು—ಇತ್ತ ಯಾರಿಂದಲೂ ಆದರವಿಲ್ಲದಿರುವ, ಅನಾಥೆಯಾದ ಆ ಹುಡುಗಿ– ಜ್ಞಾನದಾ– ಇವಳಿಗಾಗಿ–ಅಂದರೆ ಮಾಧುರಿಗಾಗಿ ಅಡಿಗೆಯ ಮನೆಯಲ್ಲಿ ಏಕಾಂಗಿಯಾಗಿ ಮೂಲೆಯಲ್ಲಿ ಕುಳಿತು ತಲೆ ತಗ್ಗಿಸಿ, ಬಡಿಸಬೇಕಾದ ಪದಾರ್ಥಗಳನ್ನೆಲ್ಲ ತಟ್ಟೆಗಳಲ್ಲಿ ಸಿದ್ಧಮಾಡಿಟ್ಟು ಒಂದಾಗುತ್ತಲೂ ಒಂದು ತೆಗೆದು ತೆಗೆದು ಮಾಧುರಿಯ ಕೈಗೆ ಕೊಡುತ್ತಿದ್ದಳು.

ಸ್ವರ್ಣಮಂಜರಿಯು ಮಾತನಾಡುತ್ತ ಆಡುತ್ತ ಮಾಧುರಿಯ ಮದುವೆಯ ಮಾತನ್ನು ಎತ್ತುತ್ತಲೇ ಆ ಹುಡುಗಿಯು ಬಡಿಸುವುದನ್ನು ಅಲ್ಲಿಗೇ ಬಿಟ್ಟು ಅಲ್ಲಿಂದ ಓಡಿ ಅಡಿಗೆಯ ಮನೆಯನ್ನು ಸೇರಿಬಿಟ್ಟಳು.

"ಏನು ಬೇಕು ತಂಗಿ?"

"ಏನೂ ಬೇಡಕ್ಕ. ನಾನು ಇನ್ನು ಬಡಿಸುವುದಿಲ್ಲ.'' ಅಷ್ಟು ಹೇಳಿದ್ದೆ ತಟ್ಟೆ ಚಮಚಗಳನ್ನು ನೆಲದ ಮೇಲೆ ಬಡಿದು ಅಲ್ಲಿಂದ ಆ ಹುಡುಗಿಯು ಓಡಿಯೇ ಬಿಟ್ಟಳು.

ಇಷ್ಟರಲ್ಲಿ ಸ್ವರ್ಣಮಂಜರಿಯು ಗಟ್ಟಿಯಾಗಿ ಕೂಗಿದಳು. "ಕೊಂಚ ಉಪ್ಪು ತೆಗೆದುಕೊಂಡು ಬಾ ಮಗು."

ಆದರೆ ಉಪ್ಪು ಕೊಡೋಣವೆಂದರೆ ಮಾಧುರಿಯೇ ಪತ್ತೆಯಿಲ್ಲ.

ಸ್ವರ್ಣಮಂಜರಿಯು ಮತ್ತೆ ಮತ್ತೆ ಕೂಗತೊಡಗಿದಳು. "ಲೇ ಮಗು, ಎಲ್ಲಿ ಹೋದೆಯೇ? ನಿನ್ನ ಸೋದರಮಾವ ಊಟಕ್ಕೆ ಕುಳಿತಿದ್ದಾನೆ. ಬೇಗ ಉಪ್ಪು ತೆಗೆದುಕೊಂಡು ಬಾ, ಬೇಕಂತೆ—ಬೇಗ."

ಆದರೂ ಮಾಧುರಿಯು ಅಡಿಗೆಯ ಮನೆಯೊಳಗೆ ಬರಲಿಲ್ಲ. ಸ್ವರ್ಣ ಮಂಜರಿಯು ಕೋಪದಿಂದ ಗಟ್ಟಿಯಾಗಿ ಕೂಗಿದಳು. "ಯಾರಿಗೂ ಕೇಳಿಸು ವುದಿಲ್ಲವೇನ್ರೆ? ಇವರುಗಳು ಊಟ ಬಿಟ್ಟು ಹಾಗೆಯೇ ಎದ್ದುಬಿಡಲೇನು?''

ಇಷ್ಟಾದರೂ ಮಾಧುರಿಯು ಬರಲಿಲ್ಲ. ಅದನ್ನು ನೋಡಿ ಜ್ಞಾನದೆಯು ಸುಮ್ಮನೆ ಕುಳಿತಿರುವುದು ಸರಿಯಲ್ಲವೆಂದು ತಿಳಿದು ಯೋಚಿಸಿದಳು— ಉಪ್ಪನ್ನು ಕೈಯಿಂದ ಬಡಿಸಬೇಕಾದುದಿಲ್ಲ. ಚಮಚದಿಂದ ಬಡಿಸಬಹುದು. ಅದಕ್ಕೆ ಈ ಅಜ್ಞೆ ತನಗೇ ಇರಬೇಕೆಂದುಕೊಂಡಳು. ನೂರಾರು ಕಡೆ ಹರಿದು ಕೊಳಕಾದ ಸೀರೆಯಿಂದ ಬಹು ಹುಷಾರಿನಿಂದ ತನ್ನ ಮೈಯೆಲ್ಲವನ್ನೂ ಮುಚ್ಚಿ ಕೊಂಡು ಉಪ್ಪನ್ನು ಕೈಯಲ್ಲಿ ಹಿಡಿದು ಅವಳು ನಿದಾನವಾಗಿ ಬಾಗಿಲವರೆಗೂ ಬಂದು ಅಲ್ಲಿ ನಿಂತುಬಿಟ್ಟಳು.

ಅತಿಥಿಗಳಿಬ್ಬರೂ ಜ್ಞಾನದೆಯನ್ನು ನೋಡದಿದ್ದರೂ ಸ್ವರ್ಣಮಂಜರಿಯು ನೋಡಿದಳು. ಒಂದು ಸಲ ಜ್ಞಾನದೆಯನ್ನು ಮೇಲಿನಿಂದ ಕೆಳಗಿನವರೆಗೂ ದುಮುಗುಟ್ಟಿಕೊಂಡು ನೋಡಿ ತಗ್ಗುಧ್ವನಿಯಾದರೂ ಕಠೋರವಾಗಿ, "ನಿನಗೆ ತರುವುದಕ್ಕೆ ಯಾರು ಹೇಳಿದರು? ಮಾಧುರಿ ಎಲ್ಲಿ?" ಎಂದು ಕೇಳಿದಳು.

ಜ್ಞಾನದಾ ಬಾಗಿಲಿನ ಒಳಗಿನಿಂದಲೇ ಅತ್ಯಂತ ಕುಗ್ಗಿದ ಧ್ವನಿಯಲ್ಲಿ, ''ಎಲ್ಲಿಗೆ ಹೋದಳೋ ಗೊತ್ತಿಲ್ಲ'' ಎಂದಳು.

"ಅದಕ್ಕೆ ನಾನಿದೀನೀಂತ ಓಡಿಬಂದೆಯೋ ? ಒಂದೇ ಮಾತನ್ನ ನಿನ್ನ ಹತ್ತಿರ ಎಷ್ಟು ಸಲ ಚಚ್ಚಿಕೋ ಬೇಕು ಹೇಳು ? ಸಾವಿರ ಸಲ ಹೇಳಿದ್ದಾಯಿತು. ನಿನ್ನ ಮುಖ ನೋಡುವುದರಿಂದ ಏಳೇಳು ಜನ್ಮಕ್ಕೂ ನರಕಕ್ಕೆ ಬೀಳಬೇಕಾಗುತ್ತೆ ಕಣೆ, ನನ್ನ ಮುಂದೆ ಬರಬೇಡಾಂತ. ಇವತ್ತು ಅತುಲ ಊಟಕ್ಕೆ ಬಂದಿದಾನೆಯೋ ಇಲ್ಲವೋ – ಅದಕ್ಕೆ ಅವನ ಮುಂದೆ ನೀನು ಸಿದ್ಧವಾಗಬೇಕಲ್ಲ! ಇದೊಂದು ನೆವ. ಉಪ್ಪಿನ ಪಾತ್ರೆ ಅಲ್ಲಿ ಬಡಿದುಹೋಗು."

ಪಾತ್ರೆಯನ್ನು ಕೆಳಗಿಟ್ಟು ಜ್ಞಾನದಾ ಹೊರಟು ಹೋದಳು. ಅವಳು ಅಲ್ಲಿಂದ ಜೀವಂತಳಾಗಿಯೇ ಹೋದಳು ! ಏಕೆಂದರೆ ಭೂಮಿತಾಯಿಯು ಅಲ್ಲೇ ಬಾಯಿ ತೆರೆದು ಅವಳನ್ನು ತನ್ನ ಉದರದಲ್ಲಿ ಸೇರಿಸಿಕೊಳ್ಳಲಿಲ್ಲ !

ಸ್ವರ್ಣಮಂಜರಿಯು ತಾನೇ ಉಪ್ಪು ಬಡಿಸಿದಳು.

ಪುನಃ ತನ್ನ ಜಾಗದಲ್ಲಿ ಕುಳಿತು ಅತುಲನ ಕಡೆ ನೋಡಿ, "ನಿನಗೇನೋ ಗಂಡು ಹುಡುಗ, ಎಂತಹ ನಾಚಿಕೆಯೋ ನಿನಗೆ ? ಹೀಗೆ ತಲೆ ತಗ್ಗಿಸಿಕೊಂಡು ಊಟಮಾಡುತ್ತಾ ಇದ್ದೀ. ಸರಿಯಾಗಿ ತಲೆ ಎತ್ತಿಕೊಂಡು ಊಟಮಾಡು" ಎಂದಳು.

ಮಾಧುರಿಯ ಮಾವ, "ಆ ಹುಡುಗಿ ಯಾರು ?" ಎಂದು ಕೇಳಿದ.

ಸ್ವರ್ಣಮಂಜರಿಯು ಮುಸಿನಕ್ಕು, "ಯಾರೂ ಅಲ್ಲ........ನೀವು ಊಟ ಮಾಡಿ" ಎಂದಳು.

ಆದರೆ ಅತುಲನಿಗೆ ಊಟ ರುಚಿ ಇಲ್ಲದಾಯಿತು. ಪೂರಿ ಗಂಟಲೊಳಗೆ ಇಳಿಯದೇ ಹೋಯಿತು. ಹೇಗೆ ಇಳಿದೀತು? ಇಂದು ಮಾಧುರಿಯನ್ನು ನೋಡಿ, ಅವನು ಅವಳ ರೂಪಕ್ಕೆ ಮುಗ್ಧನಾಗಿ ಬಿಟ್ಟಿದ್ದ. ಅವನು ಜ್ಞಾನದೆಯನ್ನು ಚೆನ್ನಾಗಿ ಬಲ್ಲ. ಈಗ ಅವಳು ಅವನನ್ನು ಪ್ರೀತಿಯಿಂದ ಕಾಣುತ್ತಾಳೆಯೋ ಅಥವಾ ತಿರಸ್ಕಾರದಿಂದ ನೋಡುತ್ತಾಳೆಯೋ ಯಾವುದೂ ಅವನಿಗೆ ಸರಿಯಾಗಿ ಗೊತ್ತಿಲ್ಲ. ಆದರೂ ಒಂದು ದಿನ ಅವನು ಅವಳನ್ನೇ ಪ್ರಾಣಕ್ಕಿಂತ ಹೆಚ್ಚಾಗಿ ಅಪೇಕ್ಷಿಸುತ್ತಿದ್ದ. ಇದು ಅವನಿಗೆ ಚೆನ್ನಾಗಿ ಗೊತ್ತು. ಅಂತಹ ಸಮಯದಲ್ಲಿ ಸಹ ಅವಳು ಕಾರಣವಿಲ್ಲದೆ ಎಂದೂ ತಾನಾಗಿಯೇ ನೆಪಗಳನ್ನು ಮಾಡಿಕೊಂಡು ಅವನ ಮುಂದೆ ಬಂದು ನಿಂತವಳಲ್ಲ. ಅಂತಹುದರಲ್ಲಿ

ಇಂದು ಸ್ವರ್ಣಮಂಜರಿಯು ಆರೋಪಿಸಿದ ನಿರ್ಲಜ್ಜತೆಯ ಅಪವಾದದಲ್ಲಿ ಅತುಲನು ಹೇಗೆ ತಾನೆ ವಿಶ್ವಾಸಪಟ್ಟಾನು?

ಸಂಜೆಗೆ ಕೊಂಚ ಮುಂಚೆ ಕಿರಿಯ ಸೊಸೆಯು ತನ್ನ ಮಗಳನ್ನು ಕರೆದು ಕೊಂಡು ತವರು ಮನೆಗೆ ಹೊರಟು ಹೋದಳು. ಆದರೆ ಅವಳು ಹೋಗುವಾಗ ದುರ್ಗಕ್ಕನ ಭೇಟಿ ತೆಗೆದುಕೊಂಡು ಹೋಗಲಿಲ್ಲ. ಕೇವಲ ಒಂದು ನಿಮಿಷದವರೆಗೆ ಅಡಿಗೆಯ ಮನೆಯೊಳಕ್ಕೆ ನುಗ್ಗಿ ಜ್ಞಾನದೆಯ ಕೈಯಲ್ಲಿ ಒಂದು ಹತ್ತು ರೂಪಾಯಿಯ ನೋಟನ್ನು ಇಟ್ಟು ಕಳ್ಳನಂತೆ ಓಡಿಹೋದಳು. ಅಲ್ಲಿ ಅವಳು ಆ ಹೆಣ್ಣುಮಗಳ ಪ್ರೀತಿಯ ಪ್ರಣಾಮವನ್ನು ಸಹ ಸರಿಯಾಗಿ ಸ್ವೀಕರಿಸುವಷ್ಟು ಹೊತ್ತು ಕೂಡ ಇರಲಿಲ್ಲ.

ಮನೆಯೊಳಗೆ ಆ ಹೆಣ್ಣುಮಗುವಿನ ಅಂತಸ್ಥಲವನ್ನು ಗ್ರಹಿಸಿದ್ದವಳೊಬ್ಬಳೇ! ಆ ಕಿರಿಯ ಸೊಸೆಯೂ ಸಹ ಇಂದು ಬೇರೆ ಕಡೆಗೆ ಹೋಗಿ ಬಿಟ್ಟಳು. ಅವಳು ಹಿಂದಿರುಗುವುದು ಇನ್ನೆಷ್ಟು ದಿನಗಳಿಗೋ ಯಾರು ಬಲ್ಲರು!

ಕಿರಿಯ ಸೊಸೆಯು ಮನೆಯಲ್ಲಿದ್ದುದರಿಂದ ಜ್ಞಾನದೆಗೆ ವಿಶೇಷ ಉಪಕಾರವೇನೂ ಆಗುತ್ತಿರಲಿಲ್ಲ. ಮತ್ತೊಬ್ಬರ ದುಃಖದಲ್ಲಿ ಸಹಾನುಭೂತಿ ತೋರ್ಪಡಿಸುವುದಕ್ಕೂ, ಅವರ ವ್ಯಥೆಯನ್ನು ದೂರಮಾಡುವುದಕ್ಕೂ ಬಹಳ ವ್ಯತ್ಯಾಸವಿದೆ. ಮತ್ತೊಬ್ಬರ ದುಃಖವನ್ನು ದೂರಮಾಡಲು ಪ್ರಯತ್ನಿಸುವ ಕೆಲಸ ಎಲ್ಲರದೂ ಅಲ್ಲ. ಹೀಗಿದ್ದರೂ ಸಹ ಚಿಕ್ಕಮ್ಮ ಹೊರಟು ಹೋಗುವುದನ್ನು ನೋಡಿ ಆ ಹೆಣ್ಣುಮಗುವಿನ ಹೃದಯವು ಕತ್ತಲು ಗವಿಯಲ್ಲಿ ಹೊಕ್ಕಂತಾಯಿತು.

ವೈಶಾಖವು ಅರ್ಧ ಕಳೆದುಹೋಯಿತು. ಆ ಮೇಲೆ ಒಂದು ದಿನ ಅನಾಥನಾಥನು ಆಫೀಸಿಗೆ ಹೋಗುವ ಸಮಯಕ್ಕೆ ಸರಿಯಾಗಿ ಸ್ವರ್ಣ ಮಂಜರಿಯು ಭಾರಿ ಚಿಂತಾಗ್ರಸ್ತಮುಖದಿಂದ ಅವನೆದುರಿಗೆ ಪ್ರತ್ಯಕ್ಷವಾದಳು.

ಅನಾಥನಾಥನು ಹೆದರಿದ. "ಏನು ಸಮಾಚಾರ ಅತ್ತಿಗೆ?"

"ಇದೇನು ಮಾಡುತ್ತಾ ಇದ್ದೀಯಪ್ಪಾ ನೀನು. ದುರ್ಗಾದೇವಿಯ ಅಂತ್ಯಕಾಲ ತೀರ ಹತ್ತಿರಕ್ಕೆ ಬಂದಿದೆ."

ಅನಾಥನಾಥನು ಕೈಯೊಳಗಿನ ಹುಕ್ಕವನ್ನು ಕೆಳಗಿಟ್ಟು ಮ್ಲಾನವದನನಾಗಿ, "ನೀನು ಹೇಳುವುದೇನು ಅತ್ತಿಗೆ? ಒಂದು ಸಮಾಚಾರವೂ ನನಗೆ ಗೊತ್ತೇ ಇಲ್ಲ!" ಎಂದನು.

"ಅಲ್ಲ, ಅಲ್ಲ. ಹಾಗೆಂದಾಕ್ಷಣ ಅವಳು ಇವತ್ತೇ ಸಾಯುತ್ತಾಳೇಂತಲ್ಲ. ಆದರೆ ಅವಳು ಇನ್ನು ಹೆಚ್ಚು ದಿವಸ ಬದುಕುವ ಹಾಗೆ ಕಾಣುವುದಿಲ್ಲ.' ಹೆಚ್ಚು ಅಂದರೆ ಹತ್ತು ಹದಿನೈದು ದಿವಸ ಬದುಕಿಯಾಳು, ಅಷ್ಟೆ! ಅವಳು ಸತ್ತ ಮೇಲೆ ಆರು ತಿಂಗಳೋ ವರ್ಷವೋ ಆ ಹುಡುಗಿಯ ಮದುವೆಯನ್ನಂತೂ ಮಾಡುವ ಹಾಗಿಲ್ಲವೋ? ಏನೇ ಆಗಲಿ ನಮ್ಮ ಮಾಧುರಿಯ ಮದುವೆ ಜಾಗ್ರತೆ ಆಗುವುದು ಒಳ್ಳೆಯದು. ನಾನು ಇದೇ ಜ್ಯೇಷ್ಠಮಾಸದಲ್ಲಿ ಅವಳ ಲಗ್ನ ಮಾಡಿಬಿಡುತ್ತೇನೆ. ಯಾರ ಮಾತನ್ನೂ ಕೇಳುವುದಿಲ್ಲ. ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ ಅಂತಹ ಹುಡುಗ ಸಿಕ್ಕುತ್ತಾನೇನು? ಅದೂ ಅಲ್ಲದೆ, ನಾವು ನಮ್ಮ ಕೈಯಿಂದ ಅವನಿಗೆ ಒಂದು ಕಾಸನ್ನೂ ಖರ್ಚುಮಾಡಬೇಕಾಗಿಲ್ಲ. ಮಾಧುರಿಯನ್ನು ನೋಡಿ ಹುಡುಗನೇ ಒಪ್ಪಿಕೊಂಡಿದ್ದಾನೆ—ಅವಳ ರೂಪ ಗುಣಗಳಿಗೆ ಮುಗ್ಧನಾಗಿದ್ದಾನೆ. ಅವನ ಅಮ್ಮನೂ ಅಷ್ಟೆ; ಈವಾಗ ಅದು ಬೇಕು, ಇದು ಬೇಕು, ಅದಿಲ್ಲದಿದ್ದರೆ ಆಗುವುದಿಲ್ಲ, ಇದಿಲ್ಲದಿದ್ದರೆ ಆಗುವುದಿಲ್ಲ ಅಂತ ಹೇಳುವ ಹಾಗಿಲ್ಲ. ತಡಮಾಡಿಕೊಂಡು ಇಂತಹ ಸುಯೋಗವನ್ನು ಕಳೆದುಕೊಳ್ಳಲೇ?"

"ಛೆ, ಛೆ, ಹಾಗೆಂದಾದರೂ ಆಗುತ್ತದೆಯೇ? ನೀನು ನನ್ನ ಮನೆಯ ಯಜಮಾನಿ; ಮಾಡುವುದು ಬಿಡುವುದು ಎಲ್ಲಾ ನಿನ್ನನ್ನೇ ಸೇರಿದ್ದು! ಆ ಹುಡುಗಿ ಕೂಡ ನಿನ್ನ ಮಗಳೆಂದೇ ನಾವು ತಿಳಿದಿದ್ದೇವೆ. ನಿನ್ನ ಹುಡುಗಿಯನ್ನು, ನಿನ್ನ ಅತ್ತಿಗೆಯ ಮಗನಿಗೆ ಕೊಟ್ಟು ಮದುವೆಮಾಡುತ್ತೀಯೆ. ಮಾಡು. ನಿನಗೆ ಯಾವಾಗ ಬೇಕೋ ಹೇಗೆ ಬೇಕೋ ಹಾಗೆ ಮಾಡು. ನಾನೇನೂ ಇದರಲ್ಲಿ ಕೊಂಚ ಕೂಡ ಹು, ಹಾ ಅನ್ನುವುದಿಲ್ಲ. ಈ ಮಾತು ಖಂಡಿತ ಅತ್ತಿಗೆ!" ಎಂದು ಅನಾಥನಾಥನು ತಲೆಯಾಡಿಸುತ್ತಾ ಒಪ್ಪಿದ.

"ಸ್ವರ್ಣಮಂಜರಿಯು ಹೆಮ್ಮೆಯಿಂದ, ನನಗೆ ಗೊತ್ತಿಲ್ಲವೇ ನೀನು ನನ್ನ ಮಾತನ್ನು ಎಂದಿಗೂ ತೆಗೆದುಹಾಕುವುದಿಲ್ಲ ಅನ್ನುವುದು. ಇದುವರೆಗೂ ನನ್ನ ಯಾವ ಮಾತನ್ನೂ ನೀನು ತೆಗೆದುಹಾಕಿಲ್ಲ. ನೀನು ಅಂತಹ

ಮೈದುನನಲ್ಲವೇ ಅಲ್ಲ. ಅದಕ್ಕೇ ನಾನು ಹೇಳಿದ ಹಾಗೆ ಮಾಡು ಅನ್ನುವುದು. ಇನ್ನು ಹೆಚ್ಚು ವಿಚಾರಮಾಡಬೇಡ. ಹೇಗಾದರೂ ಮಾಡಿ ಆದಷ್ಟು ಜಾಗ್ರತೆ ಆ ಪೀಡೆಗಳನ್ನು ಕತ್ತುಹಿಡಿದು ಮನೆಯಿಂದ ಆಚೆಗೆ ಕಳಿಸಿಬಿಡು. ಇದು ಮಾಡಿದ ವಿನಹ ಮಾಧುರಿಯ ವಿವಾಹವಾಗುವ ಹಾಗಿಲ್ಲ. ಊರಿನವರೆಲ್ಲ ಆಗಲೇ ಹಾಗೆ ಹೀಗೆ ಅಂತ ತರಹವಾರಿ ಮಾತುಗಳನ್ನು ಆಡುವುದಕ್ಕೆ ಪ್ರಾರಂಭಿಸಿದ್ದಾರೆ. ಇನ್ನು ಆ ದುರ್ಗಾದೇವಿ ಏನಾದರೂ ಗೊಟಕ್ ಅಂದು ಬಿಟ್ಟರೆ ಬಹಳ ಗಡಿಬಿಡಿಗೆ ಸಿಕ್ಕಬೇಕಾಗುತ್ತೆ. ನನಗೆ ಚೆನ್ನಾಗಿ ಗೊತ್ತು. ಆ ಪೀಡೆ-ಜ್ಞಾನದಾ ಮನೆಯಲ್ಲಿದ್ದರೆ ಒಂದು ಹೆಣವಿದ್ದ ಹಾಗೆ. ಮೊದಲು ಆ ಹೆಣವನ್ನು ಸಾಗಿಸಿಬಿಡು. ಇಲ್ಲದೆ ಹೋದರೆ ದುರ್ವಾಸನೆ ಹರಡಿ ನಾವು ಈ ಮನೆಯಲ್ಲಿ ವಾಸಮಾಡುವುದು ಕಷ್ಟವಾಗುತ್ತದೆ'' ಎಂದಳು.

ಹಿರಿಯತ್ತಿಗೆಯ ಈ ಮಾತುಗಳು, ಅವಳ ಮುಂದಾಲೋಚನೆ ಇವುಗಳ ಮೇಲೆ ಗೌರವವಿಟ್ಟುಕೊಂಡು ಅನಾಥನಾಥನು ತನ್ನ ಆಫೀಸಿಗೆ ಹೊರಟು ಹೋದ. ಮಾರನೆಯ ದಿವಸ ಮಾತಿನಮಲ್ಲಿ ಸ್ವರ್ಣಮಂಜರಿಯು ಮನೆಯಲ್ಲಿನ 'ಹೆಣ'ವನ್ನು ಹೊರಗೆ ಹಾಕುವ ಸಲುವಾಗಿ ಒಳ್ಳೆ ಉರಿಬಿಸಿಲಿನ ಹೊತ್ತಿನಲ್ಲಿ ನಾಲ್ಕಾರು ಜನರನ್ನು ಗುಟ್ಟಾಗಿ ಹೇಳಿ ಕಳುಹಿಸಿ ಕರೆಸಿದಳು. ಅವರೇ ಘಾಟಿನಲ್ಲಿನ ಹೆಣಗಳಂತೆ ಕಂಡುಬಂದರು. ಅವರ ಪರಿಚಯವನ್ನು ಹೇಳಲು ಸ್ವಯಂ ಸ್ವರ್ಣಮಂಜರಿಯೇ ನಾಲ್ಕಾರು ಸಲ ಉಗುಳು ನುಂಗ ಬೇಕಾಯಿತು. ಬಹಿಷ್ಕಾರದ ಬೆದರಿಕೆ ತೋರಲು ಬಂದಿದ್ದರೇ!

ಆ ದಿವಸ ಮಧ್ಯಾಹ್ನ, ಬಹಳ ದಿವಸಗಳ ಮೇಲೆ, ಸ್ವರ್ಣಮಂಜರಿಯು ಬಂದು ದುರ್ಗಾದೇವಿಗೆ ದರ್ಶನಕೊಟ್ಟಳು. "ಇವತ್ತು ಹೇಗಿದೆಯೇ ದುರ್ಗಾ?"

ದುರ್ಗಾದೇವಿಯು ಬಹು ಕಷ್ಟದಿಂದ ಮಗ್ಗಲು ಬದಲಾಯಿಸಿದಳು. "ಸರಿಯಾಗಿಯೇ ಇದೆ. ಇನ್ನು ಹೊರಟುಬಿಡುವ ಸಮಯ ಅಕ್ಕ. ಸಾಕಾಗಿದೆ. ಹೆಚ್ಚು ದಿವಸ ಹೀಗೆಯೇ ಅನುಭವಿಸುತ್ತ ಬಿದ್ದಿರದಂತೆ ಆಶೀರ್ವಾದ ಮಾಡು, ಅಕ್ಕ." ಎಂದಳು.

ಸ್ವರ್ಣಮಂಜರಿಯು ಸಹಾನುಭೂತಿಯ ಸ್ವರದಲ್ಲಿ, "ಸಾಕು ಬಿಡೆ! ಇದೇನು ಇಂತಹ ಮಾತನಾಡುತ್ತೀಯೆ? ಹೆದರಿಕೆ ಎಂತಹದು ದುರ್ಗಾ?

ಬೇಗ ಗುಣಮುಖಳಾಗಿ ಬಿಡುತ್ತಿ." ಎಂದಳು. ದುರ್ಗಾದೇವಿಯು ಸುಮ್ಮ ನಿದ್ದಳು. ಪ್ರತಿವಾದಿಸಲಿಲ್ಲ.

ಸ್ವರ್ಣಮಂಜರಿಯು ಆ ಮಾತನ್ನು ಅಲ್ಲಿಗೇ ಬಿಟ್ಟಳು. "ದುರ್ಗಾ ಹುಡುಗಿ ಬೆಳೆದು ಬಿಟ್ಟಿದ್ದಾಳೆ. ಅದರಿಂದ ವರ ಕೂಡ ತೀರ ಹುಡುಗನಾದರೆ ಚೆನ್ನಾಗಿ ಕಾಣುವುದಿಲ್ಲ. ಹೌದೋ ಅಲ್ಲವೋ? ವರನ ವಯಸ್ಸು ಕೊಂಚ ಹೆಚ್ಚಾಗಿದ್ದರೆ ಒಳ್ಳೆಯದು ಅನ್ನಿಸುತ್ತೆ. ಈಗ ನೋಡಿರುವ ವರನ ವಯಸ್ಸು ಕೊಂಚ ಹೆಚ್ಚಾಗಿಯೇ ಇದೆ. ಒಳ್ಳೆಯದೇ ಆಯಿತು. ಅದಕ್ಕೇನಂತೆ· ಅವನಿಗೆ ತಾಯಿತಂದೆ ಯಾರೂ ಇಲ್ಲ. ಇವಳೇ ಮನೆಗೆ ಯಜಮಾನಿಯಾಗಿ ಬಿಡುತ್ತಾಳೆ. ಅವನು ತಮ್ಮ ಊರಿನ ಇನ್ನೂ ಒಬ್ಬರನ್ನು ಕರೆದು ಕೊಂಡು ಹುಡುಗಿಯನ್ನು ನೋಡುವುದಕ್ಕೆ ಇವತ್ತು ಬರುತ್ತೀನೀಂತ ಹೇಳಿ ಕಳುಹಿಸಿದ್ದಾನೆ. ಹೇಳಿ ಹೋಗೋಣಾಂತ ಬಂದೆ."

ಯಾರ ತಾಯಿತಂದೆಗಳೂ ಅಮರರಲ್ಲವೆಂದು ಹೇಳಬಹುದು! ಆದರೆ ಈಗ ಸ್ವರ್ಣಮಂಜರಿಯು ಮಾತುಕತೆಯಾಡಿರುವ ಸುಪಾತ್ರನಿಗಾಗಿರುವ ವಯಸ್ಸಿನವನಾವನಿಗೂ ಆ ವಯಸ್ಸಿನಲ್ಲಿ ತಾಯಿತಂದೆಗಳು ಜೀವಂತರಿರಲು ಸಾಧ್ಯವಿಲ್ಲ.

ಸ್ವರ್ಣಮಂಜರಿಯು ಹೇಳತೊಡಗಿದಳು—"ಸಧ್ಯ ಈಗ ಕಾಳಿಕಾ ದೇವಿಯ ಕೃಪೆಯಿಂದ ಆ ವರನು ಹುಡುಗಿಯನ್ನು ಒಪ್ಪಿಬಿಟ್ಟರೆ ಸಾಕು. ಅಲ್ಲಿಗೆ ನಿನ್ನ ಮೈದುನ ವರ ಹುಡುಕುವುದಕ್ಕೆ ಪಟ್ಟ ಕಷ್ಟವೆಲ್ಲ ಸಫಲವಾಗು ತ್ತದೆ. ಸರಿ ಇನ್ನು ಕೊಡೋದು ಬಿಡೋದರ ಮಾತು—ಅವನ್ನು ನಾನೇ ಹೇಳುತ್ತೀನೆ—"

ಮಾತು ಮುಗಿಯುವುದಕ್ಕೆ ಮುಂಚೆಯೇ ಬಲವಂತದಿಂದ ದುರ್ಗಾ ದೇವಿಯು ಎದ್ದು ಕುಳಿತಳು. ಕಣ್ಣೀರು ತುಂಬಿ, ವಾರಗಿತ್ತಿಯ ಕಡೆ ದೈನ್ಯ ದಿಂದ ಈಕ್ಷಿಸುತ್ತ, "ಆಶೀರ್ವಾದ ಮಾಡು ಅಕ್ಕ, ಈ ಸಂಬಂಧ ತಪ್ಪದಿರ ಲೆಂದು. ನಾನು ನೋಡಿಯಾದರೂ ಸಾಯಬಹುದು" ಎನ್ನುತ್ತಿದ್ದ ಹಾಗೆಯೇ ನೀರಿನಿಂದ ತುಂಬಿದ್ದ ಕಣ್ಣುಗಳಿಂದ ಎರಡು ತೊಟ್ಟು ಉದುರಿದವು·

"ಆಶೀರ್ವಾದ ಮಾಡಲಾರನೇನೆ ನಾನು? ಮಾಡುತ್ತೀನಮ್ಮ ಮಾಡು ತ್ತೀನೆ. ನಾನಂತೂ ಹಗಲೂ ರಾತ್ರಿ, 'ದೇವರೆ, ಹೇಗಾದರೂ ಸರಿ,

ಎಲ್ಲಿಯಾದರೂ ಸರಿ, ನಮ್ಮ ಹುಡುಗಿಗೆ ಒಂದು ಜಾಗ ಹೊಂದಿಸಿ ಕೊಡು' ಅಂತ ದೇವರನ್ನು ಪ್ರಾರ್ಥಿಸುತ್ತಿದ್ದೇನೆ. ಹೀಗಿರುವಾಗ ನೀನು ಹುಡುಗಿಯ ಮದುವೆಯನ್ನು ನೋಡದೆ ಇರುವೆಯಾ ? ದುರ್ಗಾ, ನೀನು ನಿನ್ನ ಅಳಿಯನ ಮುಖ ನೋಡಿದ ಮೇಲೆ.........''

ದುರ್ಗಾದೇವಿಯು ಸೆರಗಿನಿಂದ ಕಣ್ಣೊರೆಸಿಕೊಂಡಳು. ಸ್ವರ್ಣ ಮಂಜರಿಯು ಕೈಯಿಂದ ಚುಟಿಕೆ ಹಾಕಿ, ಅಲ್ಲಿ ಇಲ್ಲಿ ಕೊಂಚ ನೋಡಿ, "ಈ ಬಡಪಾಯಿ ಅನಾಥನೋ ಬಹು ಮಕ್ಕಳ ತಂದೆ. ನೋಡಿದವರಿಗೆ ಗಂಟಾಗಿ ನೂರೈವತ್ತು ರೂಪಾಯಿ ಕಾಣುತ್ತದೆ. ಒಂದು ಕಾಸು ಕೂಡ ಮಿಗು ವುದಿಲ್ಲ. ನನಗೆಲ್ಲಾ ಗೊತ್ತಿದೆ. ತನ್ನ ಮಗಳ ಮದುವೆಯನ್ನೇ ಹೇಗೆ ಮಾಡು ತ್ತಾನೆಯೋ ದೇವರೇ ಬಲ್ಲ. ಅವನು ಈ ಚಿಂತೆಗಳಿಂದ ಎಂದಿಗೆ ಬಿಡುಗಡೆ ಹೊಂದಿಯಾನೊಂತ ಯೋಚಿಸಿ ಯೋಚಿಸಿ ನಾನು ಕಡ್ಡಿಯಾಗಿದ್ದೇನೆ! ಇನ್ನು ಇದಕ್ಕೆ ಮೇಲೆ ಜ್ಞಾನದಾ ಮದುವೆಯ ಖರ್ಚೂ ಸಹ ಅವನ ಮೇಲೆಯೇ! ನಿನಗೆಲ್ಲವೂ ಗೊತ್ತು ದುರ್ಗಾ. ಅವತ್ತು ಅನಾಥ ನನ್ನ ಹತ್ತಿರ ಹೇಳಿಕೊಂಡ ಪಾಪ – ನಾಚಿಕೆಯಿಂದ ನಿನ್ನ ಮುಂದೆ ಬಾಯಿಬಿಟ್ಟಿಲ್ಲ— ಜ್ಞಾನು ಮದುವೇಗೆ ಖರ್ಚಿಗೆ ದುಡ್ಡೊದಗಿಸಬೇಕಾದರೆ ಒಂದೇ ಒಂದು ಮಾರ್ಗ ಕಂಡುಬರುತ್ತದೆ ಅತ್ತಿಗೇಂತ. ಏನೊಂದರೆ—ಈ ಮನೆಯಲ್ಲಿ ನಿನಗೆ ಹೇಗೂ ಒಂದು ಹಿಸ್ಸೆಯಿದೆಯಲ್ಲ ? ಅದನ್ನ ಆಧಾರಮಾಡುವುದೊಂತ. ನಿನಗೇನು ಕಷ್ಟವಾಗುವುದಿಲ್ಲ ದುರ್ಗಾ. ಆ ಆಧಾರಪತ್ರಕ್ಕೆ ಒಂದು ಹೆಬ್ಬೆಟ್ಟಿನ ಗುರುತು ಹಾಕಿಬಿಟ್ಟರೆ ಆಯಿತು. ಬರಿ ಮಾತಿನ ಮೇಲೆ ಈಗಿನ ಕಾಲದಲ್ಲಿ ದುಡ್ಡು ಕೊಡುವವರು ಯಾರೂ ಇಲ್ಲ. ಈ ಹಾಳು ಕಲಿಕಾಲವೇ ಹಾಗೆ. ಬದುಕಿ ದ್ದರೂ ಅಷ್ಟೆ ಸತ್ತರೂ ಅಷ್ಟೆ; ಯಾರ ಮೇಲೆ ಯಾರೂ ವಿಶ್ವಾಸವಿಡುವುದಿಲ್ಲ —" ಎಂದಳು.

ದುರ್ಗಾದೇವಿಯು ಒಡನೆಯೇ ಹೇಳತೊಡಗಿದಳು—"ನಾನಿನ್ನೆಷ್ಟು ದಿವಸ ಬದುಕಿರುತ್ತೇನೆ ಅಕ್ಕ. ನೀನು ಏನು ಮಾಡೊಂತ ಹೇಳಿದರೆ ಅದ ನ್ನೆಲ್ಲ ನಾನು ಮಾಡುತ್ತೇನಕ್ಕ. ನನ್ನ ಹುಡುಗಿಗೆ ಮಾವನ ಮನೆಯಲ್ಲಿ ದುಃಖ ವಾಗದಿರಲಿ ಎಂಬುದು ನಿನ್ನ ಮನಸ್ಸಿನಲ್ಲಿಟ್ಟುಕೊಂಡರೆ ನನಗೆ ಅಷ್ಟೇ ಸಾಕು."

"ಸರಿ ಬಿಡು. ದುಃಖವೆಲ್ಲಿಂದ ಬಂತೇ ದುರ್ಗಾ? ಅಪ್ಪ, ಚಿಕ್ಕಪ್ಪ— ಅಮ್ಮ ಚಿಕ್ಕಮ್ಮ ಇವರುಗಳಲ್ಲಿ ಭೇದವಿರುತ್ತದೆಯೇ? ಹಾಗೆ ಭೇದವಿದ್ದರೆ ನಾನೇಕೆ ಹಗಲು ರಾತ್ರಿ ಸರಿಯಾಗಿ ನಿದ್ದೆ ಊಟವಿಲ್ಲದೆ ಜ್ಞಾನು ವಿಚಾರ ಇಷ್ಟೊಂದು ಯೋಚಿಸುತ್ತಾ ಇರುತ್ತಿದ್ದೆ. ನನಗಂತೂ ಜ್ಞಾನು ಬೇರೆ ಅಲ್ಲ, ಮಾಧುರಿ ಬೇರೆ ಅಲ್ಲ. ಲೇ, ಜ್ಞಾನು, ನಿಮ್ಮಮ್ಮನ ಕಣ್ಣೀರು ಒರೆಸಿ ಹತ್ತಿರವೇ ಒಂದೆರಡು ಗಂಟೆ ಗಾಳಿಹಾಕುತ್ತಾ ಇರು ಮಗು."

ಇಷ್ಟು ಹೇಳಿ ದುರ್ಗಾದೇವಿಯ ಮನಸ್ಸಿನಲ್ಲಿ ಒಂದು ಬಗೆಯ ಆಸೆ ಹಾಗು ಭರವಸೆಯನ್ನು ಹುಟ್ಟಿಸಿ, ಅವಳ ಮನೆಯಲ್ಲಿನ ಹಿಸ್ಸೆಯನ್ನೂ ಎತ್ತಿ ಹಾಕಲು ಜಾಲವನ್ನು ಬೀಸಿ ಸ್ವರ್ಣಮಂಜರಿಯು ಎದ್ದುನಿಂತಳು.

ಎಷ್ಟೋ ದಿವಸಗಳನಂತರ ದುರ್ಗಾದೇವಿಯ ಮೃತಪ್ರಾಯ ಮಲಿನ ಮುಖದ ಮೇಲೆ ಇಂದು ಕೊಂಚ ಆನಂದದ ಬೆಳಕು ಕಂಡು ಬಂದಿತು. ಹುಡುಗಿಯ ಕೈಯಿಂದ ಬೀಸಣಿಗೆಯನ್ನು ಕಿತ್ತುಕೊಂಡು ತನ್ನ ಕಟ್ಟಿಗೆಯಂತಹ ಕೈಯನ್ನು ಆ ಮಗುವಿನ ತಲೆ, ಮುಖಗಳ ಮೇಲೆ ಪ್ರೀತಿಯಿಂದ ಆಡಿಸುತ್ತಾ ಸ್ನೇಹಪೂರ್ಣ ಸ್ವರದಲ್ಲಿ, "ಇಲ್ಲೇ ಮಲಗಿ ಕೊಂಚ ನಿದ್ದೆಮಾಡು, ಮಗು" ಎಂದಳು.

ದುರ್ಗಾದೇವಿಯು ಬಲವಂತದಿಂದ ಮಗಳನ್ನು ಎದೆಗವುಚಿಕೊಂಡಳು. "ನೀನು ಈ ಅಭಾಗಿನಿಯ ಹೊಟ್ಟೆಯಲ್ಲಿ ಹುಟ್ಟಿದ್ದಕ್ಕೆ ಈ ಚಿಕ್ಕವಯಸ್ಸಿನಲ್ಲೇ ಇಷ್ಟೊಂದು ಕಷ್ಟಗಳನ್ನು ಅನುಭವಿಸಬೇಕಾಗಿ ಬಂತಲ್ಲೇ! ದುಃಖವನ್ನು ಸಹಿಸಿ ಸಹಿಸಿ, ಒಳಗೇ ಯೋಚಿಸಿ ಕೊರಗಿ ಒಣಗಿ ಕಡ್ಡಿಯಾಗಬೇಕಾಗಿ ಬಂತಲ್ಲಮ್ಮ! ನನ್ನ ಹೊಟ್ಟೆಯಲ್ಲೇ ಗಂಡಾಗಿ ಹುಟ್ಟಬಾರದಾಗಿತ್ತೇ!"

ಬಹಳ ದಿನಗಳ ಮೇಲೆ, ತಾಯಿಯ ಪ್ರೇಮವನ್ನು ಪಡೆದ ಆ ಹೆಣ್ಣು ಮಗಳ ಕಣ್ಣುಗಳಿಂದ ಒಂದೇ ಸಮನೆ ನೀರಿನ ಧಾರೆಯು ಹರಿಯತೊಡಗಿತು. ಕೊಂಚ ಹೊತ್ತು ತಾಯಿ ಮಗಳು ಹಾಗೆಯೇ ಮಲಗಿದ್ದರು. ಹಾಗೆಯೇ ಕೊಂಚ ಜಂಪೂ ಹತ್ತಿತು. ಏಕಾಏಕಿ ತಾಯಿಯು ಕುಲುಕಿದ್ದರಿಂದ ಜ್ಞಾನದಾ ಗಾಬರಿಯಿಂದ ಎದ್ದುಕುಳಿತಳು. ತಾಯಿಯು, "ಮಗು, ಏಳಮ್ಮಾ, ಏಳು. ಇನ್ನು ಹೆಚ್ಚು ಹೊತ್ತು ಇಲ್ಲ. ನನ್ನ ತಗಡಿನ ಡಬ್ಬಿಯಲ್ಲಿ ಒಂದು ಸಾಬೂ

ನಿನ ಚೂರು ಬಿದ್ದಿದೇಂತ ಕಾಣುತ್ತೆ. ಹೋಗು ಮಗು, ಜಾಗ್ರತೆ ಹೋಗಿ ಕೊಳದಲ್ಲಿ ಕೈಕಾಲು ಮುಖ ತೊಳೆದುಕೊಂಡು ಬಾ—ಇದೇ ನೋಡು ಮತ್ತೆ ನಿನ್ನಲ್ಲಿರುವ ತಪ್ಪು. ಹೇಳಿದ ಮಾತನ್ನು ಥಟ್ಟನೆ ಕೇಳುವುದಿಲ್ಲ. ಹೋಗು ಮತ್ತೆ ಬೇಗ'' ಎಂದು ಅವುಸರಿಸಿದಳು.

ತಾಯಿಯ ಅನುಜ್ಞೆಗನುಸಾರವಾಗಿ ಜ್ಞಾನದೆಯು ತಗಡಿನ ಡಬ್ಬಿಯನ್ನು ತೆಗೆದು ಹುಡುಕಿದಳು. ಒಂದು ಹಳೆಯ ಸಾಬೂನಿನ ತುಂಡು ಸಿಕ್ಕಿತು. ಅದನ್ನು ತೆಗೆದುಕೊಂಡು ಒಂದು ಟವಲನ್ನು ಭುಜದಮೇಲೆ ಹಾಕಿಕೊಂಡು ಮ್ಲಾನವದನದಿಂದ ಕೊಳದ ಕಡೆ ಹೊರಟಳು. "ಲೇ ಮಗು, ಚೆನ್ನಾಗಿ ತಿಕ್ಕಿ ತಿಕ್ಕಿ, ಕೈಕಾಲು ಮುಖ ತೊಳೆದುಕೊಳ್ಳಬೇಕು ಕಣೆ. ಸುಮ್ಮನೆ ಸಾರಿಸಿಕೊಂಡು ಬಂದು ಬಿಡಬೇಡ. ಬೇಗ ಬಂದು ಬಿಡಬೇಕು. ಅವರು ಯಾವ ಘಳಿಗೆಗೆ ಬಂದು ಬಿಡುತ್ತಾರೆಯೋ ಯಾರಿಗೆ ಗೊತ್ತು'' ಎಂದಳು ದುರ್ಗಾದೇವಿ.

ಕೊಳದಿಂದ ಹಿಂತಿರುಗಿ ಬಂದ ಜ್ಞಾನದಾ ಆಶ್ಚರ್ಯಪಟ್ಟುಬಿಟ್ಟಳು. ಸಾವಿನ ಪಂಜರದಲ್ಲಿ ಕಾಲು ಮುರಿದುಕೊಂಡು ಸಿಕ್ಕಿರುವ ಅವಳ ತಾಯಿಯು ಹಾಸಿಗೆಯಿಂದ ಯಾವಾಗಲೋ ಎದ್ದು ತನ್ನ ಪೆಟ್ಟಿಗೆಯ ಬಳಿಗೆ ಹೇಗೆಯೋ ಹೋಗಿ, ಅದನ್ನು ತೆಗೆದು ಅದರಲ್ಲಿ ಮುಚ್ಚಿಟ್ಟಿದ್ದ ತನ್ನ ಒಂದು ಹಳೆಯ ಬಣ್ಣದ ಸೀರೆ ಕುಪ್ಪಸವನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು ಮಗಳ ದಾರಿ ಕಾಯುತ್ತ ಕುಳಿತಿದ್ದಳು. ಹುಡುಗಿಯು ಬರುತ್ತಿದ್ದ ಹಾಗೆಯೇ, "ಹಾಳಾದದ್ದು ಎಲ್ಲಿಯೋ ಜ್ಞಾನ. ನೋಡು ಮರೆತೇ ಬಿಟ್ಟೆ. ಮೊದಲು ತಲೆ ಬಾಚಿ ಬಿಡಬೇಕಾಗಿತ್ತು. ನೀನು ಕೈ ಕಾಲು ಮುಖ ತೊಳೆದುಕೊಂಡು ಬಂದೇ ಬಿಟ್ಟೆ. ಹೋಗಲಿ, ಕುಳಿತುಕೋ. ಬೇಗ ತಲೆಬಾಚಿ ಬಿಡುತ್ತೇನೆ" ಎಂದಳು.

ಹುಡುಗಿಯು ಕಾತರ ಭಾವದಿಂದ, "ಬೇಡಮ್ಮ, ನಿನ್ನ ಕಾಲಿಗೆ ಬೀಳುತ್ತೇನೆ. ನಿನ್ನಿಂದ ಆಗುವುದಿಲ್ಲ. ನೀನು ಮಲಗಿಕೊಂಡಿರು. ನಾನೇ ತಲೆ ಬಾಚಿಕೊಳ್ಳುತ್ತೇನೆ. ನನ್ನ ಆಣೆ. ನನ್ನ ಮಾತು ಕೇಳಮ್ಮಾ'' ಎಂದಳು.

ಮಗಳ ಮಾತನ್ನು ಕೇಳಿ ತಾಯಿಯು ಇಂದು ಮುಸಿನಕ್ಕಳು. ತಲೆಯಾಡಿಸುತ್ತಾ, "ಏನಂದೆ! ನನ್ನಿಂದ ಆಗುವುದಿಲ್ಲವೆ? ಚೆನ್ನಾಗಿ ಹೇಳಿದೆಕಣೆ.

ನನ್ನ ಕೈಯಲ್ಲಿ ತಲೆಬಾಚಿಸಿಕೊಳ್ಳುವುದಕ್ಕೆ ಊರಿನ ಹುಡುಗಿಯರೆಲ್ಲಾ ಓಡಿ ಬಂದು ಯಾವಾಗಲೂ ಸುತ್ತುಗಟ್ಟಿರುತ್ತಿದ್ದರು. ಗೊತ್ತೇನೆ ಮಗು? ನಾನು-ನಾನು-ನಿನ್ನ ತಲೆ ಬಾಚಲಾರನೆ? ಹು, ಬಾ, ಕುಳಿತುಕೋ, ಹೊತ್ತು ಮಾಡ ಬೇಡ" ಎಂದು ಮಗಳ ಕೈಹಿಡಿದು ಬಲವಂತದಿಂದ ಕೂಡಿಸಿಕೊಂಡಳು.

ತುಂಬಾ ಪ್ರೀತಿಯಿಂದ, ಮನಸ್ಸಿಟ್ಟು, ಮಗಳ ತಲೆಯನ್ನು ತಾಯಿಯು ಬಲು ಚೆನ್ನಾಗಿ ಬಾಚಿದಳು. ಇದೇ ಅವಳು ಕಡೆಯಸಲ ಮಗಳಿಗೆ ಮಾಡಿದ ಶೃಂಗಾರ! ಹುಡುಗಿಯ ಅಂಗಾಲುಗಳಿಗೆ ಕೆಂಪುಬಣ್ಣವನ್ನು ಹಾಕಿದಳು; ಹಣೆಗೆ ಮುದ್ದಾಗಿ ಕುಂಕುಮವಿಟ್ಟಳು; ತುಟಿಗಳಿಗೆ ತುಟಿಕೆಂಪು ಹಚ್ಚುವು ದನ್ನೂ ಮರೆಯಲಿಲ್ಲ. ಮಗಳ ಮುಖವನ್ನು ತಿರುಗಿಸಿ, ತಿರುಗಿಸಿ, ಒಂದುಸಲ ಚುಂಬಿಸಿ ಮನದೊಳಗೇ ಅಂದುಕೊಂಡಳು—"ಜನ ನನ್ನ ಮಗಳು ನೋಡು ವುದಕ್ಕೆ ಚೆನ್ನಾಗಿಲ್ಲಾಂತ ಹೇಳುತ್ತಾರೆ. ಹೌದು ನಿಜ—ಬಣ್ಣವೇನೋ ಕೊಂಚ ಕಪ್ಪು. ಆದರೆ ಇಂತಹ ಮಾಟವಾದ ಮುಖ, ಇಂತಹ ಕಣ್ಣು ಗಳು ನೆರೆಹೊರೆಯ ಯಾವ ಹುಡುಗಿಗೆ ತಾನೆ ಇದೆ?"

ಬೇರೆ ಯಾವ ಹುಡುಗಿಯು ತಾಯಿಯನ್ನು ಇಷ್ಟು ಪ್ರೀತಿಸುತ್ತಾಳೆ? ಯಾವ ಹುಡುಗಿಯ ಪಂಚಪ್ರಾಣಗಳೂ ಹೀಗೆ ತನ್ನ ತಾಯಿಯಲ್ಲಿ ಇರು ತ್ತದೆ? ಯಾವ ಹುಡುಗಿಯ ಹೃದಯವು ಇಷ್ಟೊಂದು ಮಾತೃಭಕ್ತಿ, ಮಾತೃ ಪ್ರೇಮಗಳಿಂದ ಉಜ್ಜಲವಾಗಿ ಪ್ರದೀಪಿತವಾಗಿರುತ್ತದೆ! ಆ ಪ್ರಕಾಶದಲ್ಲಿ ಆ ಕುರೂಪವು ಮರೆಯಾಗಿ ಅವಳು ಸುರೂಪಿಯಾಗಿ ಕಾಣುತ್ತಾಳೆ. ಇವು ಯಾವುದೂ ದುರ್ಗಾದೇವಿಗೆ ಗೋಚರಿಸಲಿಲ್ಲ. ಆದರೆ ಹುಡುಗಿಗೆ ತೊಡಿ ಸಲು ಒಂದಾದರೂ ಒಡವೆ ಇಲ್ಲವಲ್ಲಾ ಎಂಬ ಯೋಚನೆ ಬಂದೊಡನೆಯೇ ಆ ತಾಯಿಗೆ ಅತ್ಯಂತ ದುಃಖವಾಯಿತು. ಆದರೆ ಆ ದುಃಖವು ತನ್ನಷ್ಟಕ್ಕೆ ತಾನೇ ಹೇಗೆ ಯಾವಾಗ ದೂರವಾಯಿತೋ ಗೊತ್ತಿಲ್ಲ. ಆಮೇಲೆ ಅವಳಿಗೆ ಒಡವೆಗಳಿಲ್ಲದಿರುವಿಕೆಯು ಅಷ್ಟೇನು ಭಾರಿ ಯೋಚನೆಯಾಗಿ ಕಂಡುಬರಲಿಲ್ಲ.

ಇನ್ನೂ ಸೂರ್ಯ ಮುಳುಗಲು ಬೇಕಾದಷ್ಟು ಹೊತ್ತಿತ್ತು. ಆದರೂ ಅವಳು ಮಲಗಿಕೊಂಡಿರಲು ಒಪ್ಪಲಿಲ್ಲ. ಎಲ್ಲ ದುಃಖಗಳನ್ನೂ ಮರೆತು ಮಗ ಳನ್ನು ಎದುರಿಗೆ ಕೂಡಿಸಿಕೊಂಡು ಕುಳಿತೇ ಇದ್ದಳು. ಯಾರು ಹೇಳಿದರೂ ಮಲಗಲಿಲ್ಲ.

ಜ್ಞಾನದೆಯನ್ನು ನೋಡಲು ವರ, ವರನ ಕಡೆಯವರು ಬರುತ್ತಾರೆಂದು ತಿಳಿದು ನೆರೆಯ ನೀಲಕಂಠಚಟರ್ಜಿಯ ಹೆಂಡತಿಯು ಬಂದಳು. ತರಂಗಿಣಿಯೂ ಬಂದಳು. ಯಥಾಸಮಯದಲ್ಲಿ ಹುಡುಗಿಯನ್ನು ನೋಡುವವರೂ ಬಂದರು. ಅವರುಗಳನ್ನು ಹೊರಗಡೆಯ ಬೈಠಕ್ ಖಾನೆಯಲ್ಲಿ ಕೂಡಿಸಲಾಗಿತ್ತು. ಹುಡುಗಿಯನ್ನು ಅಲ್ಲಿಗೆ ಕರೆತರಲಾಯಿತು. ಹೆಂಗಸರು ಪಕ್ಕದ ಕೊಠಡಿಯಿಂದ ಇಣಿಕಿ ನೋಡುತ್ತಿದ್ದರು.

ಕಣ್ಣೆದುರಿಗೆ ತನ್ನ ಏಕಮಾತ್ರ ಸಂತಾನವನ್ನು ಭರ್ಜಿಯಿಂದ ತಿವಿಯುವಾಗ ವೃದ್ಧತಂದೆಯ ಮನಸ್ಸಿಗೆ ಹೇಗೆ ಆರಾಮವಿಲ್ಲದಿಲ್ಲವೋ, ಕಾಲವನ್ನು ಹೇಗೆ ಅತಿ ಕಷ್ಟದಿಂದ ಕಳೆಯಬೇಕಾಗುತ್ತದೆಯೋ ಹಾಗೆಯೇ ದುರ್ಗಾದೇವಿಯು ಆರಾಮವಿಲ್ಲದವಳಾಗಿ, ಕಷ್ಟದಿಂದ ಕಾಲ ತಳ್ಳುತ್ತಿದ್ದಳು. ತನ್ನ ಮಲಿನವಾದ ಹಾಸಿಗೆಯ ಮೇಲೆ ಕುಳಿತು ಉತ್ಕಂಠಿತಳಾಗಿ ಪರಿಣಾಮವನ್ನು ಪ್ರತೀಕ್ಷೆಮಾಡುತ್ತಿದ್ದಳು.

ವರ ಮತ್ತು ಮಧ್ಯಸ್ತಗಾರರಿಬ್ಬರೂ ಫಲಹಾರವನ್ನು ತೀರಿಸಿಕೊಂಡು ಹೊರಟು ಹೋದರು. ಅವರು ಹೊರಟು ಹೋದರೆಂದು ದುರ್ಗಾದೇವಿಯೂ ತಿಳಿದುಕೊಂಡಳು. ಅವರು ಬಾಡಿಗೆಗೆ ತಂದಿದ್ದ ಗಾಡಿಯು ಖಟಖಟಿಸುತ್ತಾ ಹೊರಟು ಹೋಯಿತು. ಆ ಶಬ್ದವನ್ನು ಅವಳೂ ಕೇಳಿದಳು. ಆಮೇಲೆ ತರಂಗಿಣಿಯು ಅವಳ ಕೊಠಡಿಯೊಳಕ್ಕೆ ಬಂದು ಇಷ್ಟುದ್ದ ಅಟ್ಟಗಲ ನಿಟ್ಟುಸಿರನ್ನು ಬಿಟ್ಟು, ಅವರುಗಳು ಹುಡುಗಿಯನ್ನು ಒಪ್ಪಲಿಲ್ಲವೆಂಬ ಸಮಾಚಾರವನ್ನು ಮುಟ್ಟಿಸಿದಳು.

ದುರ್ಗಾದೇವಿಯು ಈ ವಿಚಾರವಾಗಿ ಯಾವ ಪ್ರಶ್ನೆಯನ್ನೂ ಕೇಳದೆ ಸುಮ್ಮನೆ ಕಣ್ಮುಚ್ಚಿ ಮಲಗಿಬಿಟ್ಟಳು. ಬರೀ ಅವಳು ಸುಮ್ಮನಿದ್ದು ಬಿಟ್ಟರೆ ಏನಾದ ಹಾಗಾಯಿತು! ತರಂಗಿಣಿಯು ಸುಮ್ಮನಿರಲಾರದೆ ಹೇಳತೊಡಗಿದಳು—"ಇವರಲ್ಲಿ ಅವರದೇನು ತಪ್ಪು ದುರ್ಗಾ? ಹುಡುಗಿ ಬರೀ ಮೂಳೆ ಮೂಳೆ ಬಿಟ್ಟುಕೊಂಡಿದಾಳೆ—ಎಲ್ಲಿ ನೋಡಿದರೂ ಬರೀ ಅವೆ ಎದ್ದು ಕಾಣುತ್ತವೆ! ಇಂತಹ ಹುಡುಗಿಯನ್ನು ಯಾರಾದರೂ ಒಪ್ಪಿಯಾರೆ? ದುರ್ಗಾದೇವಿ, ಮೊದಲು ಹುಡುಗಿಗೆ ಕೊಂಚ ದಿವಸ ಊಟ ಉಪಚಾರಾದಿಗಳನ್ನು ಚೆನ್ನಾಗಿ ಮಾಡಿಸಿ ಅವಳನ್ನೂ ಒಬ್ಬ ಮನುಷ್ಯಳನ್ನಾಗಿ ಮಾಡು. ಇವಳನ್ನು ನಾನು

ಹುಡುಗತನದಿಂದಲೂ ನೋಡುತ್ತಲೇ ಇದ್ದೇನೆ. ಹುಡುಗಿಯ ಸ್ಥಿತಿ ಹೇಗಿತ್ತೆ? ಪಾಪ, ಹುಡುಗಿ ಜ್ವರದಿಂದ ನರಳಿ ನರಳಿ, ಮೂಳೆ ಮೂಳೆ ಬಿಟ್ಟುಕೊಂಡಿದೆ. ಒಂದು ವರುಷ ಇವಳಿಗೆ ಔಷಧೋಪಚಾರಮಾಡಿಸಿ, ಆರೈಕೆ ಗೀರೈಕೆ ಚೆನ್ನಾಗಿ ಮಾಡಿಬಿಡು. ಆಮೇಲೆ ನೋಡು ಹುಡುಗಿ ಹೇಗಿರುತ್ತಾಳೆಂತ ಆಗ ಗೊತ್ತಾಗುತ್ತೆ! ಆಗ ಇದೇ ಹುಡುಗಿಯನ್ನೇ ನೋಡಿ ಜನ ಬೆರಗಾಗಿ ಬಿಡುತ್ತಾರೆ."

ಅದೆಲ್ಲಾ ಸರಿಯೆ. ಆದರೆ ಆ ಸುಯೋಗವೆಲ್ಲಿ ಬಂತು? ದುಡ್ಡೆಲ್ಲಿದೆ? ಒಂದು ವರುಷ ಬದುಕಿದ್ದು ಅವಳನ್ನು ಗುಂಡುಗುಂಡಾಗಿ ಮಾಡುವ ಅವಕಾಶವಾದರೂ ಎಲ್ಲಿ? ಹುಡುಗಿಯು ಹದಿನಾಲ್ಕನ್ನು ಮುಗಿಸಿ ಹದಿನೈದರಲ್ಲಿ ಕಾಲಿಟ್ಟಿದ್ದಾಳೆ! ದಿವಸಗಳೆಷ್ಟೆಷ್ಟು ಕಳೆದರೆ ಅಷ್ಟಷ್ಟು ಗಾಢಾಂಧಕಾರದಲ್ಲಿ ಹೊಕ್ಕಂತಾಗುತ್ತದೆ. ಅಷ್ಟೇ ಅಲ್ಲ ಹುಡುಗಿಯನ್ನು ಹೀಗೇ ಬಿಡುವುದರಿಂದ ಹಿರಿಯರು ಗಾಢಾಂಧಕಾರದ ನರಕದಲ್ಲಿ ತೊಳಲಬೇಕಾಗುತ್ತದೆ. ಭಾರಿ ಭಾಗ್ಯವಂತರ ಮನೆಯ ಹುಡುಗಿಯೂ ಅಲ್ಲ. ಮೇಲಾಗಿ ಅಸಹಾಯರು. ಅದರಿಂದಲೇ ಊರಿನ ಮುಖ್ಯಸ್ಥರು ಅವರುಗಳನ್ನು ಜಾತಿಚ್ಯುತರನ್ನಾಗಿ ಮಾಡಿಬಿಡುತ್ತೇವೆಂದು ಹಗಲು ರಾತ್ರಿ ಹೆದರಿಸುತ್ತಾರೆ! — ಕಾಯಲು ಇನ್ನೊಂದು ದಿವಸವಾದರೂ ಅವಕಾಶವಿಲ್ಲ—ಸಾಕು, ಕಳುಹಿಸಿ ಬಿಡಿ, ಮನೆಯಿಂದ ಓಡಿಸಿಬಿಡಿ, ಇಲ್ಲದೇ ಹೋದರೆ ಯಾರ ಕುತ್ತಿಗೆಗೆಗಾದರೂ ಕಟ್ಟಿಬಿಡಿ. ಹೇಗಾದರೂ ಸರಿ, ಯಾರ ಜೊತೆಯಲ್ಲಿಯಾದರೂ ಸರಿ. ಕಡೆಗೆ ಮದುವೆಯಾದ ಮರು ದಿವಸವೇ ಹುಡುಗಿಯು ವಿಧವೆಯಾಗುವಂತಹ ಸ್ಥಿತಿಯಲ್ಲಿ ವರನಿದ್ದರೂ ಸರಿ—ಸಹಿಸಲು ಅಸಾಧ್ಯವಾದ ದುಃಖವನ್ನು ಅನುಭವಿಸಿದ್ದಾಗಿದೆ, ದಾರಿದ್ರ್ಯದ ದೆಸೆಯಿಂದ ದಾರುಣವೇದನೆಯನ್ನು ಅನುಭವಿಸಿದ್ದಾಗಿದೆ— ಆದರಿಂದ ಮರಣೋನ್ಮುಖ ವೃದ್ಧನಾದರೂ ಸರಿಯೆ ಅವನಿಗೇ ಕಟ್ಟಿಬಿಡು! ಕಟ್ಟಿ ಜಾತಿ ಧರ್ಮಗಳನ್ನು ರಕ್ಷಿಸು! ಹಿರಿಯರು ನರಕಕೂಪದಲ್ಲಿ ಬೀಳುವುದನ್ನು ತಪ್ಪಿಸು! ಇದೇ ಕೂಗು ಕೇಳಿಬರುತ್ತಿತ್ತು.

ಆಗ ಕತ್ತಲಾಗಿದ್ದರೂ ಇನ್ನೂ ದೀಪ ಸಹ ಹಚ್ಚಿರಲಿಲ್ಲ. ಆ ಕತ್ತಲೆಯಲ್ಲಿಯೇ ಜ್ಞಾನದೆಯು ತನ್ನ ತಿರಸ್ಕೃತ, ಅಸಹ್ಯ ಶೃಂಗಾರವನ್ನು ತೆಗೆದು ಬಿಡಲು ಸುಮ್ಮನೆ ಒಳಗೆ ಹೋದಳು. ದುರ್ಗಾದೇವಿಯು ಮಲಗಿ ನಿದ್ರಿಸುತ್ತಿರಲಿಲ್ಲ— ಹೆಣದಂತೆ ಬಿದ್ದಿದ್ದಳು. ಕೊಂಚ ಹೊತ್ತಿನಲ್ಲಿಯೇ ಆ ಅಭಾಗಿ

ನಿಯೂ ಭಾರಿ ಅಪರಾಧಿಯಂತೆ ಸುಮ್ಮನೆ ಬಂದು ತಾಯಿಯ ಪಾದಗಳ ಬಳಿ ಕುಳಿತಳು. ತಾಯಿಯೂ ಕಂಡೂ ಕಂಡೂ ಉಸಿರಾಡಲಿಲ್ಲ. ಬಹಳ ಹೊತ್ತು ಆ ಹೆಣ್ಣುಮಗಳು ಹಾಗೆಯೇ ಕುಳಿತಿದ್ದಳು. ಹಸಿವು ಬಾಯಾರಿಕೆಗಳಿಂದ ಬಳಲಿದ ಅವಳ ದೇಹವು ಅಲ್ಲಿಯೇ ಕುಸಿದು, ಹಾಗೆಯೇ ನಿದ್ದೆ ಹತ್ತಿತು. ಇದನ್ನು ಕಂಡೂ, ಅನುಭವಿಸಿಯೂ ಸಹ ಆಗ ತಾಯಿಯ ಹೃದಯದಲ್ಲಿ ಮಗಳಿಗಾಗಿ ಕೊಂಚವಾದರೂ ದಯಾ ಸಂಚಾರವಾಗಲಿಲ್ಲ.

## ೧೦

ದುರ್ಗಾದೇವಿಯ ಸ್ಥಿತಿ ಯಾವ ಘಳಿಗೆ ಏನೋ ಎನ್ನುವಂತಾಗಿತ್ತು. ಅವಳ ಮಗಳು ಈಗ ಬೆಳೆದು ದೊಡ್ಡವಳಾಗಿದ್ದಾಳೆ. ಇನ್ನೂ ಮದುವೆ ಇಲ್ಲ. ಆದರಿಂದ ಹಿರಿಯರು ಗಾಢಾಂಧಕಾರದ ನರಕಕೂಪದಲ್ಲಿ ಬೀಳುವುದಷ್ಟೇ ಅಲ್ಲ—ತನ್ನ ಮರಣಾವಸ್ಥೆಯಲ್ಲಿ ಅವಳು ಯಾವ ಕೆಲಸಕ್ಕೂ ಬರುವ ಹಾಗಿಲ್ಲ; ಅವಳು ಕೈಯಿಂದ ಮುಟ್ಟಿದ ನೀರು, ಬೆಂಕಿಗಳು ಕೂಡ ಅಪವಿತ್ರ ಹಾಗು ಅಸ್ಪೃಶ್ಯವಾಗುತ್ತದೆ ಎಂಬ ಶಾಸ್ತ್ರವು, ಸಮಸ್ತ ಶಾಸ್ತ್ರಗಳನ್ನು ತಮ್ಮ ಅಪಾರ ಅನುಭವದಿಂದ ತಿಳಿದುಕೊಂಡು ಬಿಟ್ಟಿರುವೆವೆಂದುಕೊಂಡಿರುವ ನೆರೆ ಹೊರೆಯ ಅಡುಗೂಲಜ್ಜಿಗಳಿಂದ ದುರ್ಗಾದೇವಿಯ ಕಿವಿಗೆ ಬಿತ್ತು. ಇದನ್ನು ಕೇಳಿ ಪರಲೋಕ ಯಾತ್ರೆಗೆ ಹೆಜ್ಜೆಯಿಡುತ್ತಿದ್ದ ದುರ್ಗಾದೇವಿಯ ನಿಸ್ತೇಜ ಮುಖವು ಒಡನೆಯೇ ಸುಣ್ಣದಂತೆ ಬೆಳ್ಳಗಾಗಿ ಬಿಟ್ಟಿತು.

ಅನೇಕ ದಿವಸಗಳಿಂದ ಮೇಲಿಂದಮೇಲೆ ಒಂದಾಗುತ್ತಲೂ ಒಂದು ಪೆಟ್ಟು ತಿಂದು ತಿಂದು ದುರ್ಗಾದೇವಿಯ ಸ್ನೇಹಸ್ಥಾನವು—ಹೃದಯವು—ಇದ್ದಕ್ಕಿದ್ದಂತೆಯೇ ಶೂನ್ಯವಾಯಿತು—ಕಲ್ಲಿನಂತೆ ಕಠಿಣವಾಗತೊಡಗಿತು. ಯಾವ ಹುಡುಗಿಯನ್ನು ಕಂಡರೆ ಪ್ರೇಮದ ಎಲ್ಲೆ ಮೀರಿಬಿಡುತ್ತಿತ್ತೋ, ಯಾವ ಹುಡುಗಿಯಲ್ಲಿ ಅವಳಿಗೆ ಅಗಾಧವಾದ ಮಮತೆ ಇತ್ತೋ, ಅದೇ ಹುಡುಗಿಯನ್ನು ನೋಡುತ್ತಿದ್ದ ಹಾಗೆಯೇ ಅವಳು ಈಗ ಕಿಡಿ ಕಿಡಿಯಾಗಿ ಬಿಡುತ್ತಿದ್ದಳು. ಇಂದಿನ ಅಸಫಲತೆಯಿಂದ, ನಿಜವಾಗಿಯೂ ತನ್ನ ಪರಲೋಕ ಯಾತ್ರೆಗೆ ಹುಡುಗಿಯು ಕಂಟಕಪ್ರಾಯಳೆಂಬುದನ್ನು ಕೇಳಿದಮೇಲೆ ಹುಡುಗಿಯ ವಿಚಾರ

ದಲ್ಲಿ ಅವಳ ಹೃದಯವು ಆದ್ಯಂತವಾಗಿಯೂ ಕಲ್ಲಾಗಿ ಹೋಯಿತು. ಅದರಲ್ಲಿ ಲವಲೇಶವಾದರೂ ಮಮತೆಯಾಗಲಿ, ಮೋಹವಾಗಲಿ ಉಳಿಯಲಿಲ್ಲ.

ಅನಾಥಬಾಬುವನ್ನು ಕರೆಸಿ, "ಆ ಬೀದಿಯ ಗೋಪಾಲಭಟ್ಟಾಚಾರ್ಯರು ಪುನಃ ಮದುವೆಮಾಡಿಕೊಳ್ಳುತ್ತಾರೆಂದು ಕೇಳಿದೆ. ನಾನು ಸಾಯುವುದಕ್ಕೆ ಮುಂಚೆ ಒಂದು ಸಲ ಪ್ರಯತ್ನಿಸಿ ನೋಡುತ್ತೀಯಾ?" ಎಂದು ದುರ್ಗಾದೇವಿಯು ಬೇಡಿದಳು.

ಅನಾಥನಾಥನಿಗೆ ಈ ಮಾತಿನಲ್ಲಿ ನಿಜವಾಗಿಯೂ ವಿಶ್ವಾಸವುಂಟಾಗಲಿಲ್ಲ. ಅದರಿಂದ ಆ ಮಾತನ್ನು ಹಾಗೆಯೇ ಹಾರಿಸಿಬಿಡುವುದಕ್ಕೋಸ್ಕರ, "ಇಲ್ಲ, ಇಲ್ಲ, ಗೋಪಾಲಭಟ್ಟಾಚಾರ್ಯರು ಈ ವಯಸ್ಸಿನಲ್ಲಿನ್ನೇನು ಮದುವೆ ಮಾಡಿಕೊಳ್ಳುತ್ತಾರೆ. ನಿನ್ನ ಬಳಿ ಯಾರೋ ಹುಡುಗಾಟಕ್ಕಾಗಿ ಅಂದಿರಬೇಕು, ಅತ್ತಿಗೆ!" ಎಂದ.

ದುರ್ಗಾದೇವಿಯು ನಿಟ್ಟುಸಿರು ಬಿಟ್ಟಳು. "ನನ್ನ ಹತ್ತಿರ ಯಾರಿಗಾದರೂ ಹುಡುಗಾಟವೇಕಪ್ಪ? ಆತ ಗಂಡಸು. ವಯಸ್ಸನ್ನು ಯಾರು ನೋಡುತ್ತಾರೆ. ಅವರಷ್ಟೇ ವಯಸ್ಸಿನವರು ಮದುವೆ ಮಾಡಿಕೊಳ್ಳುವುದನ್ನು ನೋಡಿಲ್ಲವೇ! ನಿನ್ನಲ್ಲಿ ಬೇಡುತ್ತೇನೆ. ಹೋಗಿ, ಕೊಂಚ ವಿಚಾರಿಸಪ್ಪ. ಬದುಕಿದ್ದಷ್ಟು ದಿವಸವೂ ಏನೊಂದು ಒಳ್ಳೆಯದೂ ಪಡೆಯಲಾಗಲಿಲ್ಲ. ಹೋಗಲಿ ಸತ್ತಮೇಲೆ ನನಗೆ ಬೆಂಕಿ ಇಡುವವರೂ ಬೇಡವೆ?"

ಈ ಹುಡುಗಿಯನ್ನು ಗರ್ಭದಲ್ಲಿ ಬೆಳೆಸಿ ಈವರೆಗೆ ಲಾಲಿಸಿ, ಪಾಲಿಸಿ ಈ ವಯಸ್ಸಿನವರೆಗೆ ಬೆಳೆಸಿದರೂ ಈ ಅಂತ್ಯಕಾಲದಲ್ಲಿ ಎಲ್ಲವೂ ನಿಷ್ಫಲವಾಗಿ ಬಿಡುವುದೇ ಎಂಬುದೇ ದುರ್ಗಾದೇವಿಯ ಭಾರಿ ಶಂಕೆಯಾಗಿದ್ದಿತು. ಅವಳ ಕೈ ಬೆಂಕಿಯಿಡಲೂ ಯೋಗ್ಯವಿಲ್ಲವೆಂದ ಮೇಲೆ ಅವಳು ಹುಟ್ಟಿದಳಾದರೂ ಏಕೆ?

ಗಾಬರಿ ಗಾಬರಿಯಿಂದ ಹಾಸಿಗೆಯಿಂದೆದ್ದು ಕುಳಿತುಕೊಂಡು ದುರ್ಗಾದೇವಿಯು ಹೇಳತೊಡಗಿದಳು—"ಅನಾಥು, ಹೇಗಾದರೂ ಸರಿ, ಎಲ್ಲಾದರೂ ಸರಿ, ಯಾರೊಡನೆಯಾದರೂ ಸರಿ, ನನ್ನ ಜೀವ ಹೋಗುವುದಕ್ಕೆ ಮುಂಚೆ

ಆ ಮೂಳಿಯ ಮದುವೆಯೊಂದನ್ನು ಮಾಡಿಬಿಡು. ಇಗೋ, ನನ್ನ ಆಶೀರ್ವಾದ ದಿಂದ ನೀನು ರಾಜನಾಗುತ್ತಿ, ಅನಾಥ !"

ಈ ವಿಚಾರದಲ್ಲಿ ಅನಾಥನಾಥನ ಉದ್ದೇಶ್ಯವೂ ಪರಿಪೂರ್ಣವಾಗಿಯೇ ಇತ್ತು. ಅದರಿಂದ ಅಂದೇ ಗೋಪಾಲಭಟ್ಟಾಚಾರ್ಯರ ವಿಚಾರ ತಿಳಿದು ಕೊಳ್ಳಲು ಹೊರಟ. ವಿಚಾರದ ಸತ್ಯಾಂಶವನ್ನು ತಿಳಿದು ಅವನು ಒಂದು ಕ್ಷಣ ಮೂಕನಾಗಿ ಬಿಟ್ಟ. ಈ ವಯಸ್ಸಿನಲ್ಲಿ ಮುಪ್ಪಿನ ಗೋಪಾಲಭಟ್ಟಾಚಾರ್ಯನು ಮದುವೆಯಾಗುತ್ತಾನೆಂದಲ್ಲ. ಇಷ್ಟರಲ್ಲಿಯಾಗಲೇ ನಾಲ್ಕಾರು ಕಡೆಯಿಂದ ಹುಡುಗಿಯ ಹೊರೆಯನ್ನು ಇಳಿಸಿಕೊಳ್ಳುವ ಸಲುವಾಗಿ ಮನೆಯ ಬಾಗಿಲಿಗೆ ಬಂದು ಭಟ್ಟಾಚಾರ್ಯನನ್ನು ಸಂತೋಷಗೊಳಿಸಿ ಹೋಗಿದ್ದುದನ್ನು ಕೇಳಿ ಅನಾಥನಾಥನು ಬೆಪ್ಪಾದನು !

ಈ ಲಗ್ನವನ್ನು ಮಾಡಿಸುವುದೇ ಬಹು ಕಷ್ಟತರವಾದುದಾಗಿತ್ತು. ಅಂತಹುದರಲ್ಲಿಯೂ ದುರ್ಗಾದೇವಿಯು ತನ್ನ ಮಗಳ ಲಗ್ನವನ್ನು ಗೋಪಾಲ ಭಟ್ಟಾಚಾರ್ಯನೊಡನೆ ಮಾಡುವವಳಿದ್ದಾಳೆಂದು ಕೇಳಿ ಅದೇ ಜನಗಳ ಬಾಯಿಂದ, "ಛಿಃ ಛಿಃ! ಇದೇನನರ್ಥ !" ಎಂಬ ಮಾತುಗಳು ಹೊರಬಿದ್ದವು. ಆದರೆ ತಾಯಿಯ ಮನಸ್ಸು ಈ ನಿಂದೆಯಿಂದಲೂ ಚಲಿಸಲಿಲ್ಲ! ಅವಳ ಪರಲೋಕಯಾತ್ರೆಯು ಶಾಸ್ತ್ರವಿಧಿಗನುಸಾರವಾಗಿ, ಹೇಗಾದರೂಸರಿ, ನಡೆಯ ಬೇಕಾದುದೇ ಅತ್ಯಾವಶ್ಯಕವಲ್ಲವೇ !

ಅವಳು ಬಂಗಾಳಾ ಸ್ತ್ರೀಯಲ್ಲವೇ ! ಎಷ್ಟು ಜನ್ಮದಿಂದ ಈ ರೀತಿಯಲ್ಲಿ ಶಾಸ್ತ್ರದ ವಧಾಸ್ತಂಭದಮೇಲೆ ಎಷ್ಟು ಹೆಣ್ಣುಮಕ್ಕಳ ಬಲಿದಾನಮಾಡುತ್ತ ಬಂದಿದ್ದಾಳೆಯೋ? ಅಂತಹವಳು ಇಂದು ಈ ಕೆಲಸದಿಂದ ಹಿಂಜರಿಯುವಳೇ ದುಃಖದಮೇಲೆ ದುಃಖ! ಗೋಪಾಲಭಟ್ಟಾಚಾರ್ಯನು, "ಹುಡುಗಿಯನ್ನು ನೋಡಿದನಂತರ ಮದುವೆಯ ಮಾತು !' ಎಂದು ಹೇಳಿಕಳುಹಿಸಿದ. ಸ್ಮಶಾನದ ದಾರಿ ಹಿಡಿಯುತ್ತಿರುವ ಮುದಿಗೊಡ್ಡಾದರೂ ಸಹ ಅನೇಕ ಹುಡುಗಿಯರನ್ನು ನೋಡಿ ಅವರಲ್ಲಿ ತನಗೆ ಬೇಕಾದವರನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ, ಹಕ್ಕು ಅವರಿಗಿರುವುದೂ ನಿಜ ! ಅವರು ಹಾಗೆ ಸುಲಭ ಸಹಜವಾಗಿ ಆಶಿಸು ವುದೂ ಸರಿ ! ಇದೇ ಈ ದುರ್ಭಾಗ್ಯದೇಶದ ಹಿರಿಮೆ—ವಿಶೇಷತೆ !

ಬೇಸಿಗೆಯಲ್ಲಿ ಒಂದು ನಾಲ್ಕುಹನಿ ಮಳೆ ಬಂದರೆ ಒಣಹುಲ್ಲು ಸಹ ತಲೆಯೆತ್ತುತ್ತದೆ. ಅಂತೆಯೇ ಕೇವಲ ಈ ಸಣ್ಣ ಆಶಾಜನಕ ಆಸರೆಯನ್ನು ಪಡೆದು ನಿರ್ಜೀವವಾಗಿದ್ದ ಚೇತನಾರಹಿತವಾಗಿದ್ದ ಆಸೆಯು ಕ್ಷಣಾರ್ಧದಲ್ಲಿ ತಲೆಯೆತ್ತಿತು. ಅವಳು ತನ್ನ ಮೈದುನ ಅನಾಥನಾಥನ ಕೈಹಿಡಿದು, "ನಿನ್ನನ್ನು ನನ್ನ ಸ್ವಂತ ತಮ್ಮನೆಂದು ತಿಳಿದಿದ್ದೇನೆ, ನೀನು ನನ್ನ ತಮ್ಮನಾಗಿ ಹೇಗಾದರೂ ಮಾಡಿ, ಈ ಪಾಪಿಯ ಕೈಯಿಂದ, ಅಭಾಗಿನಿಯ ಕೈಯಿಂದ ನಾನು ಸತ್ತಮೇಲೆ ಬೆಂಕಿ ಇಡಿಸುವಂತೆ ಮಾಡಿಬಿಡಪ್ಪ ಸಾಕು! ಪಂಚಮಿಯು ಲಗ್ನವೇ ಚೆನ್ನಾಗಿದೆ. ಅವರು ಇವತ್ತೇ ಹುಡುಗಿಯನ್ನು ನೋಡುವುದಕ್ಕೆ ಬರಲಿ. ಹೋಗಿ ತಿಳಿಸಿಬಿಡು." ಎಂದಳು.

ಮದುವೆಯಾಗದ ವಿನಹ ತಾಯಿಯ ಕ್ರಿಯಾಕರ್ಮವಮಾಡುವುದೂ ನಿಷಿದ್ಧವೆಂದು ಜ್ಞಾನದೆಯೂ ಕೇಳಿದಳು. ಅದರಿಂದ ಅವಳು ಅನ್ನಪಾನಾದಿ ಶಾಸ್ತ್ರಗಳನ್ನು ಬಿಟ್ಟುಬಿಟ್ಟಳು. ಅವಳೂ ಬಂಗಾಳೀ ಹುಡುಗಿಯೇ! ಅವಳ ಹೃದಯವು ಚಿತೆಯ ಬೆಂಕಿಯಂತೆ ಉರಿಯತೊಡಗಿತು.

ಸಂಜೆ ಅವಳು ಅಡಿಗೆಯ ಮನೆಯಲ್ಲಿ ಒಬ್ಬಳೇ ಕುಳಿತು ತಾಯಿಗೆ ಹೊಟ್ಟೆಗೆ ಕೊಡಲು ಏನನ್ನೋ ಮಾಡುತ್ತಿದ್ದಳು. ಆಗ ಇದ್ದಕ್ಕಿದ್ದಂತೆಯೇ ಮತ್ತೊಮ್ಮೆ ಅವಳ ರೂಪ ಪ್ರದರ್ಶಕ್ಕೆ ಕರೆ ಬಂತು.

ಸ್ವರ್ಣಮಂಜರಿಯು ರಭಸದಿಂದ ಬಂದು, "ಲೇ ಜ್ಞಾನು, ಆ ಪಾತ್ರೆಯನ್ನು ಒಲೆಯಿಂದ ಇಳಿಸು. ನಡಿ, ಬೇಗ ನಡಿ. ನಿನ್ನನ್ನು ನೋಡುವುದಕ್ಕೆ ಬಂದುಬಿಟ್ಟಿದ್ದಾರೆ. ಒಂದು ಸೀರೆ ಉಟ್ಟುಕೊಂಡು ಬಂದುಬಿಡು ಸಾಕು. ಅವರು ಹೀಗೆಯೇ ಹೆಚ್ಚು ಅಲಂಕಾರಾದಿಗಳಿಲ್ಲದೆ ಸಹಜ ರೂಪದಲ್ಲಿಯೇ ನಿನ್ನನ್ನು ನೋಡಲಿ" ಎಂದದ್ದೇ ಹೇಗೆ ಬಂದಳೋ ಹಾಗೆಯೇ ಹೊರಟು ಹೋದಳು.

ಅನಾಥನಾಥನು ಇನ್ನೂ ಆಫೀಸಿನಿಂದ ಬಂದಿರಲಿಲ್ಲ. ಆ ಕಾರಣದಿಂದ ಅತಿಥಿಸತ್ಕಾರಾದಿಗಳು ಸ್ವರ್ಣಮಂಜರಿಯ ಪಾಲಿಗೇ ಬಿದ್ದಿತ್ತು. ಹುಡುಗಿಯನ್ನು ನೋಡಲು ಸ್ವಯಂ ವರಮಹಾಶಯನೇ ದಯಮಾಡಿಸಿದ್ದ. ಜೊತೆಯಲ್ಲಿ ಒಬ್ಬ ಹುಡುಗ ಬಂದಿದ್ದ. ಅವನು ಹೇಗೋ ದೂರದ ಸಂಬಂಧದಿಂದ ಅವನ

ಸೋದರಳಿಯನಾಗಬೇಕು. ಹುಡುಗರ ಕಣ್ಣುಗಳಿಗೆ ಹುಳುಕುಗಳು ಮರೆಯಾಗುವುದಿಲ್ಲವೆಂದು ತಿಳಿದು ವರನು ತನ್ನ ಆ ಸೋದರಳಿಯನನ್ನು ಜೊತೆಯಲ್ಲಿ ಕರೆದುತಂದಿದ್ದ. ವಸ್ತ್ರಭೂಷಣಾಲಂಕಾರವಿಲ್ಲದೆ ಸಾಧಾರಣವಾಗಿ ಬರಬೇಕೆಂಬುದೂ ಆ ಹುಡುಗನ ಸಲಹೆಯೇ. ಏಕೆಂದರೆ ಶೃಂಗಾರಾದಿಗಳಿಂದ ಹುಳುಕುಗಳನ್ನು ಮುಚ್ಚಲು ಸಾಧ್ಯ!

ಆ ಸೋದರಳಿಯನು ಆರುಗಂಟೆಯ ಗಾಡಿಗೆ ಕಲ್ಕತ್ತೆಗೆ ತೆರಳಬೇಕಾಗಿತ್ತು. ಅವನು "ಬೇಗ, ಬೇಗ" ಎಂದು ಅವಸರಮಾಡತೊಡಗಿದ. ಸ್ವರ್ಣಮಂಜರಿಯು ಮರೆಯಲ್ಲಿ ನಿಂತು ತಗ್ಗಿದ ಧ್ವನಿಯಲ್ಲಿ ಬೇಗ ಬರಬೇಕೆಂದು ಅವಸರಮಾಡತೊಡಗಿದಳು. ಜ್ಞಾನದಾ ಬರಲೇ ಇಲ್ಲ. ಒಂದು ಸೀರೆ ಉಟ್ಟುಕೊಂಡು ಬರುವುದಕ್ಕೆಷ್ಟು ಹೊತ್ತಾಗುತ್ತೆ ಮಹಾ? ತಡವಾಗುತ್ತಿರುವುದನ್ನು ನೋಡಿ ಸ್ವರ್ಣಮಂಜರಿಯು ದಾಸಿಯನ್ನು ಕಳುಹಿಸಿದಳು. ಅವಳು ಜ್ಞಾನದೆಯ ಕೈಯನ್ನು ಹಿಡಿದು ಎಳೆದುಕೊಂಡು ಬಂದಳು. ಅವಳನ್ನು ನೋಡುತ್ತಲೇ ಸ್ವರ್ಣಮಂಜರಿಯು ಕೋಪದಿಂದ ಮೈಮರೆತು ಗರ್ಜಿಸಿದಳು. "ಎಲ್ಲಾ ತೆಗೆದುಹಾಕೆ ಸಧ್ಯ! ಹೀಗೆಲ್ಲಾ ಶೃಂಗಾರಮಾಡಿಕೊಂಡು ಬಾ ಅಂತ ಯಾರು ನಿನಗೆ ಹೇಳಿದ್ದು? ಹೋಗು, ಬೇಗ ಎಲ್ಲಾ ತೆಗೆದುಬಿಟ್ಟು ಬಾ—"

ನೋಡಲು ಬಂದಿದ್ದವರು ಈ ಕೂಗಾಟವನ್ನು ಕೇಳಿ ಆಶ್ಚರ್ಯದಿಂದ ತಲೆಯೆತ್ತಿ ನೋಡುವ ಪ್ರಯತ್ನಮಾಡಿದರು. ವರನಿಗೆ ಎಲ್ಲಾ ಸಮಾಚಾರವೂ ಗೊತ್ತಾಯಿತು. "ಹಾಗಾದರೆ, ಹಾಗೆಯೇ ಬರಲಿ. ನಾನು ಇನ್ನು ಹೆಚ್ಚು ಹೊತ್ತು ಕಾಯಲಾರೆ" ಎಂದು ಹೇಳಿದ ಆ ವರ.

ದಾಸಿಯು ಹುಡುಗಿಯನ್ನು ಕರೆತಂದು ಎದುರಿಗೆ ನಿಲ್ಲಿಸಿದಳು. ಹುಡುಗಿಯ ಅದ್ಭುತ ಶೃಂಗಾರವನ್ನು ವರನು—ಆ ಹುಡುಗನು ನೋಡಿದೊಡನೆಯೇ ಬಹು ಪ್ರಯಾಸದಿಂದ ನಗುವಿನ ವೇಗವನ್ನು ಬಿಗಿಹಿಡಿಯಬೇಕಾಯಿತು. "ನಾಳೆ, ನನ್ನ ನಿಷ್ಕರ್ಷೆಯನ್ನು ಹೇಳಿಕಳುಹಿಸುತ್ತೇನೆ" ಎಂದು ಆ ವರನು ಹೇಳಿದ. ಅವನ ಅಳಿಯನು ಎದ್ದು ಮುದಿಮಾವನನ್ನು ಕರೆದುಕೊಂಡು ಹೊರಟುಹೋದ.

ಫಲಾಹಾರಕ್ಕೆ ಸಿದ್ಧವಾಗಿತ್ತು. ಆದರೆ ಗಾಡಿ ತಪ್ಪಿಬಿಡಬಹುದೆಂಬ ಭಯದಿಂದ ಅದನ್ನು ಕೈಯಿಂದ ಮುಟ್ಟಲು ಸಹ ಅವಕಾಶವಾಗಲಿಲ್ಲ.

ಮೂರನೆಯ ದಿವಸ ಅವರು ಕೊಡಬಹುದಾದ ಸಮಾಚಾರವೇನಿರಬಹುದೆಂಬುದು ಸ್ಪಷ್ಟವಾಗಿಯೇ ಇತ್ತು. ದೊಡ್ಡಮ್ಮ ಹುಡುಗಿಯಮೇಲೆ ಬೈಗಳು ಸುರಿಮಳೆಸುರಿಸಿದಳು. ಅದು ಊರಿಗೆಲ್ಲಾ ಕೇಳಿಸುತ್ತಿತ್ತು! ದುರ್ಗಾದೇವಿಯ ದೇಹಸ್ಥಿತಿಯೂ ಸರಿಯಾಗಿರಲಿಲ್ಲ. ಅನರ್ಥವಾದಾತೆಂಬ ಶಂಕೆಯಿಂದ ನೆರೆಹೊರೆಯ ನಾಲ್ಕಾರು ಜನರು ಓಡಿಬಂದರು. ಆ ಹೊತ್ತಿಗೆ ಸರಿಯಾಗಿ ಅತುಲನೂ ಬಂದ. ಅವನೂ ಆರುಗಂಟೆಯ ಗಾಡಿಗೆ ಕಲ್ಕತ್ತೆಗೆ ಹೊರಟಿದ್ದ. ದಾರಿಯಲ್ಲಿ ಈ ಕೂಗಾಟವನ್ನು, ಬೈಗಳ ಸುರಿಮಳೆಯನ್ನು ಕೇಳಿ ಅವನೂ ಅದೇ ಶಂಕೆಯಿಂದ ಮನೆಯೊಳಹೊಕ್ಕನು.

ಅತುಲನನ್ನು ನೋಡುತ್ತಲೇ ಸ್ವರ್ಣಮಂಜರಿಯ ಕೋಪವು ನೂರ್ಮಡಿಸಿತು; ಕ್ಷೋಭೆಯು ಸಾವಿರಪಾಲು ಹೆಚ್ಚಾಯಿತು. ಸಂಕೋಚದಿಂದ, ಹೆದರಿಕೆಯಿಂದ ಕುಗ್ಗಿಹೋಗಿದ್ದ ಶೀರ್ಣ ಶರೀರದ ಆ ಭಾಗ್ಯಹೀನ ಹೆಣ್ಣು ಮಗುವಿನ ಕತ್ತುಹಿಡಿದು ಅವಳ ಮುಖವನ್ನು ಅತುಲನ ಮುಖಕ್ಕೆ ಹಿಡಿದು ಸ್ವರ್ಣಮಂಜರಿಯು ಗರ್ಜಿಸಿದಳು. "ನೋಡಿದೆಯಾ ಅತುಲ ? ನೋಡು—ಒಂದುಸಲ ಚೆನ್ನಾಗಿ ನೋಡು. ಈ ಕೋತಿ ತನ್ನ ಮುಖವನ್ನು ಹೇಗೆ ಸಿಂಗರಿಸಿಕೊಂಡಿದೆ, ನೋಡಿ ಸಂತೋಷಪಡು !"

ಅವಳ ಮುಖವನ್ನು ನೋಡಿ ನಗುವನ್ನು ತಡೆಯುವುದು ನಿಜವಾಗಿಯೂ ಕಷ್ಟವಾಗಿ ಹೋಯಿತು. ಅವಳು ತುಟಿಗೆ ಹಚ್ಚಿದ್ದ ಕೆಂಪು ಕೆನ್ನೆಗಳಿಗೂ ಮೆತ್ತಿತ್ತು; ಗದ್ದಕ್ಕೂ ಇಳಿದಿತ್ತು. ಕತ್ತಲು ಕೋಣೆಯಲ್ಲಿ, ಕನ್ನಡಿಯಿಲ್ಲದೆ ತನ್ನ ಕೈಯಿಂದ ಕುಂಕುಮ ಇಟ್ಟುಕೊಂಡಿದ್ದಳು. ಅದು ಹುಬ್ಬಿ ನಡುವೆ ಇರದೆ ಒಂದು ಪಕ್ಕಕ್ಕೆ ಇತ್ತು. ಒಣಗಿದ್ದ ಕೂದಲನ್ನು ಬಾಚುವ ಸಲುವಾಗಿ ಬಟ್ಟಲಿಲ್ಲದ್ದ ಎಣ್ಣೆಯನ್ನೆಲ್ಲಾ ಗಾಬರಿಯಿಂದ ಸುರಿದುಕೊಂಡುಬಿಟ್ಟಿದ್ದಳೇನೊ! ಎಣ್ಣೆಯು ಕಿವಿಯ ಸಂದಿಯಿಂದಲೂ ಕಪಾಳದಮೇಲಿನಿಂದಲೂ ಹರಿದುಬರುತ್ತಿತ್ತು.

ಒಬ್ಬಿಬ್ಬರು ಹೆಂಗಸರು ಹತ್ತಿರಲೇ ಇದ್ದರು. ಅವರು ಕಿಲಕಿಲನೆ ನಗತೊಡಗಿದರು. ತಾಯಿಯೊಬ್ಬಳತೊಡೆಯಮೇಲೆ ಒಂದು ಗಂಡುಮಗು ಕುಳಿತಿತ್ತು. "ನೋಡು, ಅತ್ತೆ ಗುಮ್ಮ ಆಗಿಬಿಟ್ಟಿದ್ದಾಳೆ. ಎಲ್ಲಿ ಮಗು, ಗುಮ್ಮ ನಾಲಿಗೆ ಹೇಗೆತೋರಿಸುತ್ತೆ, ತೋರಿಸಿ ಮತ್ತೆ!" ಎಂದಳು ಆ ಮಗುವಿನ ತಾಯಿ.

ಹುಡುಗನು ಮೂಗಿನ ಹೊಳ್ಳೆಗಳನ್ನು ಹೆಬ್ಬೆರಳಿನಿಂದ ಎತ್ತಿ, ಬಾಯಿ ಅಗಲವಾಗಿ ತೆಗೆದು ನಾಲಿಗೆ ಹೊರಗೆ ಹಾಕಿದ. ಮತ್ತೊಮ್ಮೆ ಎಲ್ಲರೂ ನಕ್ಕರು.

"ಥು, ಕತ್ತೆ!" ಎಂದು ಹುಡುಗನ ತಾಯಿಯೂ ನಕ್ಕಳು. ಜೊತೆಯಲ್ಲಿಯೇ ಬರೀ ತೋರ್ಕೆಗೆ ಹುಡುಗನ ಕೆನ್ನೆಗೆ ಮೆಲ್ಲಗೊಂದೇಟನ್ನೂ ಕೊಟ್ಟಳು.

ಅತುಲನ ಹೃದಯವನ್ನು ಯಾರೋ ಕಬ್ಬಿಣದ ಸಲಾಕಿಯಿಂದ ತಿವಿದಂತಾಯಿತು. ಎಷ್ಟೋ ದಿವಸಗಳಾಗಿ ಹೋಗಿದ್ದವು. ಹೀಗೆ ಜ್ಞಾನದೆಯ ಮುಖವನ್ನು ಅತುಲನು ದೃಷ್ಟಿಸಿ ಸ್ಪಷ್ಟರೂಪದಲ್ಲಿ ನೋಡಿರಲಿಲ್ಲ. ಬೇರೆಯವರ ಬಾಯಿಂದ, ಅವಳ ಮುಖವು ರೋಗದ ಪರಿಣಾಮವಾಗಿ ಅವಲಕ್ಷಣವಾಗಿ ಹೋಗಿದೆಯೆಂದು ಕೇಳಿದ್ದ. ಆದರೆ ಇಷ್ಟು ಕೆಟ್ಟುಹೋಗಿದೆಯೆಂದು ಅವನು ಸ್ವಪ್ನದಲ್ಲಿಯೂ ಭಾವಿಸಿರಲಿಲ್ಲ. ಹಿಂದೊಮ್ಮೆ ಅವನು ಭಯಂಕರ ರೋಗದ ಆಕ್ರಮಣದಿಂದ ಸಾವಿನ ಬಾಯಿಗೆ,ತುತ್ತಾಗುತ್ತಿದ್ದಾಗ ಇದೇ ಹುಡುಗಿಯ ಮುಖಕ್ಕೆ ಬೆರಗಾಗಿದ್ದ– ಇದೇ ಮುಖಮಂಡಲವನ್ನು ಪ್ರೇಮ ಪೂರ್ಣ ದೃಷ್ಟಿಯಿಂದ ನೋಡಿದ್ದ. ಅದು ಕಣ್ಣಿನ ತಂದ್ರಾವಸ್ಥೆಯಲ್ಲಲ್ಲ; ಉಕ್ಕುತ್ತಿದ್ದ ಕೃತಜ್ಞತೆಯ ಪ್ರತಿಫಲವಾಗಿಯಲ್ಲ; ನಿಜವಾದ ನಿರ್ಮಲ ಹೃದಯದಿಂದ ಸಂಪೂರ್ಣ ಮನಸ್ಸಿನಿಂದ ಅವಳನ್ನು, ಅವಳ ಈ ಮುಖವನ್ನು ಪ್ರೇಮದಿಂದ ನೋಡಿದ್ದ! ಇಂದು ಅಕಸ್ಮಾತ್ತಾಗಿ ನೋಡಿದ. ಆ ಮುಖಮಂಡಲವನ್ನು ಯಮರಾಜನು ಆಕ್ರಮಿಸಿ, ಅಂತ್ಯ ನೋಟೀಸನ್ನು ಜಾರಿಮಾಡಿರುವನೆಂದು ಅತುಲನು ಮನಗಂಡು ತನ್ನನ್ನು ತಾನೇ ಮರೆತುಬಿಟ್ಟ. ಅವನೇನನ್ನೋ ಹೇಳಬೇಕೆಂದು ಪಿಟಿಪಿಟಿ ಅಂದ. ಅದು ಸ್ವರ್ಣಮಂಜರಿಯ ಏರುಧ್ವನಿಯಲ್ಲಿ ಉಡುಗಿಹೋಯಿತು.

"ನೀನೆ ಇವತ್ತು ಎಲ್ಲವನ್ನೂ ಹಾಳುಮಾಡಿಬಿಟ್ಟೆ ಕಣೆ! ಒಂದು ಸ್ಮಶಾನದ ಹೆಣವನ್ನು ಮುಗ್ಧಮಾಡಲು ಈ ಶೃಂಗಾರಮಾಡಿಕೊಂಡು ಬಂದೆ. ಅದೂ ನಿನ್ನಿಂದ ಸಾಧ್ಯವಾಗಲಿಲ್ಲ. ಮುಖ ಮರೆಸಿಕೊಂಡು ಹಾಳಾಗಾದರೂ ಹೋದೆಯಾ?"

"ಹೀಗೆ ಭೂತಮಾಡಿ ಕೂಡಿಸಿದವರು ಯಾರು ? ಮುದಿಯ ಒಪ್ಪಲಿಲ್ಲ ಅಂತ ಕಾಣುತ್ತೆ !" ಎಂದು ಯಾರೋ ಕೇಳಿದರು.

ಸ್ವರ್ಣಮಂಜರಿಯು ಅತ್ತ ತಿರುಗಿ ಗರ್ಜಿಸಿದಳು. "ತಾನೇ ಮಾಡಿಕೊಂಡು ಕೂತಿದೆ. ಬೇರೆ ಯಾರು ಮಾಡಿ ಕೂಡಿಸುತ್ತಾರೆ. ಅವಳಮ್ಮ ಪ್ರಜ್ಞೆ ಇಲ್ಲದೆ ಬಿದ್ದಿದ್ದಾಳೆ. ನಾನು ಹೇಳಿದೆ, ಸುಮ್ಮನೆ ಒಂದು ಸೀರೆ ಉಟ್ಟು ಕೊಂಡು ಬಂದು ಬಿಡೂಂತ. ಕೇಳಲಿಲ್ಲ. ಶೃಂಗಾರ ಸಿಸ್ತು ಮಾಡಿಕೊಳ್ಳದೇ ಹೋದರೆ ಮುದಿಯ ಒಪ್ಪುವುದಿಲ್ಲ ಅಂತ ತಿಳಿದುಕೊಂಡು ಇರಬೇಕು. ಅದೇನು ಅಂತಹ ಶೃಂಗಾರ ಅಂತ ಕೇಳುತ್ತೀಯೋ ? ಇದೇ ಉಟ್ಟಿರೋದು ಒಂದು ಕದ್ದು ಮುಚ್ಚಿಟ್ಟ ಸೀರೆ, ತೊಟ್ಟಿರೋ ಒಂದು ಕುಪ್ಪಸ. ಜೊತೆಗೆ ಅತುಲ ಕೊಟ್ಟಿರೋ ಒಂದು ಜೊತೆ ಬಳೆ. ಅಷ್ಟೇ ! ಆ ಬಳೆಗಳನ್ನೋ ದಿನ ಕ್ಕೊಂದಿಪ್ಪತ್ತು ಸಲ ತೆಗೀತಾಳೆ, ತಿಕ್ಕುತ್ತಾಳೆ, ಇಟ್ಟುಕೊಳ್ಳುತ್ತಾಳೆ. ಈ ಕರಿ ಮುಸಡೀಗೆ ಈ ಬಳೆಗಳನ್ನು ಇಟ್ಟುಕೊಂಡು ಈಚೆಗೆ ಬರುವುದಕ್ಕೆ ನಾಚಿಕೆ ಯಾದರೂ ಏತಕ್ಕೆ ಆಗುವುದಿಲ್ಲವೇ ನಾ ಬೇರೆ ಕಾಣೆ ! ಹು, ಇನ್ನು ತೊಲಗು, ತೊಲಗೇ ! ಎದುರಿಗಿರಬೇಡ !''

ಆ ರಕ್ಷಣಾರಹಿತ ಹುಡುಗಿಯ ಈ ನಿರ್ಲಜ್ಜ ಚರಿತ್ರೆಯ ತರ್ಕವಿತರ್ಕ ಮಾಡಿ ಛೀ, ಛೀ ಅನ್ನುತ್ತಾ ಎಲ್ಲರೂ ಅಲ್ಲಿಂದ ಹೊರಟು ಹೋದರು. ಯಾವ ಅಂತರ್ಯಾಮಿಯ ಕಣ್ಣಿಂದ ಇದೆಲ್ಲ ಮರೆಯಾಗಲಿಲ್ಲವೋ ಕೇವಲ ಅವ ನೊಬ್ಬನ ಕಣ್ಣಿಂದ ಎರಡು ತೊಟ್ಟು ನೀರು ಉದುರಿತು. ಜನನವಾದಂದಿ ನಿಂದ ಇಂದಿನವರೆಗೆ ಲಜ್ಜೆಯ ಹೊಡೆತದಿಂದ ಆ ಹೆಣ್ಣುಮಗಳು ಯಾರೊ ಬ್ಬರ ಮುಂದೆಯೂ ತಲೆಯೆತ್ತಿ ನಿಂತವಳಲ್ಲ, ಮಾತನಾಡಿದವಳಲ್ಲ. ಅಂತಹ ವಳು ಇಂದು ಲಜ್ಜೆ ತೊರೆದು ತನ್ನ ದೇಹವನ್ನು—ಭಾಗ್ಯಹೀನ, ತೇಜೋಹೀನ, ರಕ್ತಹೀನ—ದೇಹವನ್ನು ಒಬ್ಬ ಮುದಿಯನಿಗೆ ಮಾರಿಕೊಳ್ಳಲು ಸ್ವಹಸ್ತದಿಂದ ಈ ಬಗೆಯ ಅಲಂಕಾರವನ್ನು ಹೇಗೆ ಮಾಡಿಕೊಂಡಳೋ ? ಅದೂ ಆ ಅಂತ ರ್ಯಾಮಿಗೊಬ್ಬನಿಗೇ ಗೊತ್ತು ! ಆದರೂ ಆ ಶರೀರವನ್ನು ಮಾರಲಾಗ ಲಿಲ್ಲ. ಹುಳುಕುಗಳೆಲ್ಲ ಹೊರಬಿದ್ದವು. ಆದರಿಂದ ಇಂದು ಅವಳನ್ನು ನೆರೆಹೊರೆಯವರಾದಿಯಾಗಿ ಪ್ರತಿಯೊಬ್ಬರೂ ಛೀ ಛೀ ಅಂದುಹೋದರು. ಯಾರೂ ಅವಳನ್ನು ಕ್ಷಮಿಸಲಿಲ್ಲ ! ಆದರೆ ಹೃದಯದಲ್ಲಿ ನೆಲೆಸಿ ಸಮಸ್ತರ

ವಿಚಾರಗಳನ್ನೂ ಗ್ರಹಿಸುವ ಆ ಅಂತರ್ಯಾಮಿಯು ಈ ಭಾಗ್ಯಹೀನ ಬಾಲಿಕೆಯ ಈ ಅಪರಾಧವನ್ನು ತಲೆಯ ಮೇಲೆ ಹೊತ್ತುಕೊಂಡಿರಬಹುದು.

ಜ್ಞಾನದಾ ಎದ್ದುನಿಂತಳು. ಇದುವರೆಗೆ ಅವಳು ಎಂದೂ ಯಾರ ಮುಂದೆಯೂ ಅತ್ತವಳಲ್ಲ. ಆದರೆ ಇಂದು ಅತುಲನೆದುರಿಗೆ ಅವಳ ಕಣ್ಣು ಗಳಿಂದ ನೀರು ಹರಿಯತೊಡಗಿತು. ಅವಳು ಯಾರಿಗೂ ಯಾವ ಮಾತಿಗೂ ಸಮಜಾಯಿಸಿ ಕೊಡಲಿಲ್ಲ; ಯಾರ ಕಡೆಯೂ ಕಣ್ಣೆತ್ತಿ ನೋಡಲಿಲ್ಲ ಕಣ್ಣೊರಸಿಕೊಳ್ಳುತ್ತಾ ಹೊರಟುಹೋದಳು.

ಕಲ್ಕತ್ತೆಗೆ ಹೋಗಲು ಬೇರೆ ಯಾವ ಗಾಡಿಯೂ ಅಂದು ಇರಲಿಲ್ಲ. ಆ ಕಾರಣದಿಂದ ಅತುಲನು ಮನೆಗೆ ಹಿಂತಿರುಗಿ ಹೊರಟು ಹೋದ. ದಾರಿ ಯಲ್ಲಿ ಎಲ್ಲ ಮಾತುಗಳಿಗಿಂತಲೂ ತನ್ನ ಚಿಕ್ಕತ್ತೆಯ ಕಡೆಯ ಮಾತುಗಳು ಅವನ ಸ್ಮರಣೆಯಲ್ಲಿ ಪದೇ ಪದೇ ಬರತೊಡಗಿದವು. ಅಂದು ಅವಳು ತವರು ಮನೆಗೆ ಹೋಗುವ ಕಾಲದಲ್ಲಿ ಅತುಲನನ್ನು ಕರೆದು, "ಅಪ್ಪಾ, ಅತುಲ, ಯಾರು ಮುತ್ತನ್ನು ಬಿಟ್ಟು ಗಾಜನ್ನು ಶೆರಗಿಗೆ ಗಂಟು ಹಾಕಿಕೊಳ್ಳುತ್ತಾರೆಯೋ ಅವರು ಆಮೇಲೆ ಮಿತಿಮೀರಿ ಪಶ್ಚಾತ್ತಾಪ ಪಡಬೇಕಾಗುತ್ತದೆ. ಜ್ಞಾಪಕ ದಲ್ಲಿರಲಿ" ಎಂದು ಹೇಳಿದ್ದಳು.

ಅವಳ ಈ ಮಾತಿನ ಸಂಪೂರ್ಣ ಮರ್ಮವನ್ನು ಅಂದು ಅವನು ತಿಳಿಯಲಾರದೆ ಹೋಗಿದ್ದ. ಆದರೆ ಇಂದು ಅವನಿಗೆ ನಿಸ್ಸಂಶಯವಾಗಿಯೂ ಆ ಮಾತುಗಳು ತನ್ನನ್ನೇ ಉದ್ದೇಶಿಸಿ ಅಂದವುಗಳು ಎಂಬುದು ಗೊತ್ತಾಯಿತು. ನಾಚಿಕೆಯಿಲ್ಲದವಳೆಂದು ಇಂದು ಯಾರನ್ನು ಎಲ್ಲರೂ ತಿರಸ್ಕರಿಸಿದರೋ, ಅಪಮಾನ ಮಾಡಿದರೋ ಅವಳ ನಾಚಿಕೆಯು ಎಲ್ಲೆ ಎಲ್ಲಿಯವರೆಗಿದೆ, ಎಷ್ಟಿದೆ ಯೆಂಬುದೂ ಇಂದು ಅವನಿಗೆ ಅರಿವಾಯಿತು.

ಇನ್ನೂ ಬೆಳಕು ಸರಿಯಾಗಿ ಹರಿದಿರಲಿಲ್ಲ. ಅಷ್ಟರಲ್ಲಿಯೇ ಅನಾಥ ನಾಥನು ಅತುಲನನ್ನು ಕರೆಯಲು ಬಂದ. "ಅತುಲ, ನಿಮ್ಮ ದುರ್ಗತ್ತೆ ಹೋಗಿ ಬಿಟ್ಟಳು. ಶ್ಮಶಾನಕ್ಕೆ ಹೋಗಬೇಕು" ಎಂದ.

"ನಡೆಯಿರಿ" ಎಂದು ಅತುಲನು ಮನೆಯಿಂದ ಹೊರಟ. ಒಂದು ವರುಷದ ಹಿಂದೆ ಇದೇ ತುಳಸೀಗಿಡದ ಪಕ್ಕದಲ್ಲಿ ಮೃತನಾದ ತಂದೆಯ ಪಾದ

ಗಳನ್ನು ತೊಡೆಯ ಮೇಲಿಟ್ಟುಕೊಂಡು ಹೇಗೆ ಕುಳಿತಿದ್ದಳೋ ಹಾಗೆಯೇ ಜ್ಞಾನದಾ ಇಂದೂ ತಾಯಿಯ ಕಾಲುಗಳನ್ನು ತೊಡೆಯ ಮೇಲಿಟ್ಟುಕೊಂಡು ಮೌನದಲ್ಲಿ ಕುಳಿತಿರುವುದನ್ನು ಅತುಲನು ನೋಡಿದ. ಒಂದೇ ಒಂದು ಸಲ ವಲ್ಲದೆ ಬೇರೆ ಯಾವ ಸಂದರ್ಭದಲ್ಲಿಯೂ ಅವಳು ಚಂಚಲಳಾದದ್ದನ್ನು ಯಾರೂ ಯಾವಾಗಲೂ ನೋಡಿರಲಿಲ್ಲ—ಅದೇ—ಆಗ ಅತುಲನ ಕಾಲುಗಳ ಮೇಲೆ ತಲೆ ಚಚ್ಚಿಕೊಂಡಿರಲಿಲ್ಲವೇ—ಅದೊಂದೇ ಸಲ. ಅದರಿಂದ ಅವಳ ಈ ಗಾಢವಾದ ಮೌನವನ್ನು ನೋಡಿ ಯಾರು ಏನನ್ನೂ ಶಂಕಿಸಲಿಲ್ಲ. ಅವಳ ಕಡೆಗೆ ಯಾರೂ ಲಕ್ಷಿಸಲೂ ಇಲ್ಲ. ನೆರೆಹೊರೆಯವರೆಲ್ಲರೂ ಹೆಣ ಸಾಗಿಸುವ ವ್ಯವಸ್ಥೆಯಲ್ಲಿದ್ದರು.

ಉಚಿತ ಸಮಯದಲ್ಲಿ ಜನಗಳು ಹೆಣವನ್ನು ಸ್ಮಶಾನಕ್ಕೆ ಸಾಗಿಸಿದರು. ಎಲ್ಲರಿಗಿಂತ ಹಿಂದೆ ಜ್ಞಾನದೆಯೂ ಹೋದಳು. ದುಃಖಿಗಳ, ನಿರ್ಭಾಗ್ಯರ ಮಗಳಾದ್ದರಿಂದ ಬೇರಾವ ಹೆಂಗಸೂ ಅವಳೊಡನೆ ಹೋಗಲಿಲ್ಲ. ಹೋಗ ಬೇಕೆಂಬ ಬಯಕೆಯೂ ಯಾರಿಗೂ ಇರಲಿಲ್ಲ.

ಮಳೆಗಾಲದ ಗಂಗೆಯು ಶ್ಮಶಾನದ ಪಕ್ಕದಲ್ಲಿಯೇ ವೇಗದಿಂದ ಹರಿಯು ತ್ತಿತ್ತು. ತಾಯಿಯ ಅಂತಿಮ ಸಂಸ್ಕಾರವನ್ನು—ದಹನ ಕ್ರಿಯೆಯನ್ನು—ಆ ಹೆಣ್ಣುಮಗಳೇ ಮೌನವಾಗಿ ಮಾಡಿದಳು. ಚಿತೆಯು ಬುರಬುರನೆ ಉರಿಯ ತೊಡಗಿತು. ಆ ಮೇಲೆ ಅವಳು ಇನ್ನೂ ಬಿದ್ದಿದ್ದ, ಬೇರೆ ರಾಶಿ ಹೆಣಗಳಿಂದ ದೂರ ಸಾಗಿ, ಕೆಳಗಿಳಿದು ಗಂಗಾಜಲದ ತೀರ ಪಕ್ಕದಲ್ಲಿ ಹೋಗಿ ಕುಳಿತು ಕೊಂಡಳು. ಯಾರೂ ಅವಳನ್ನು ಅಲ್ಲಿ ಕುಳಿತುಕೊಳ್ಳಲು ಅಡ್ಡಿಪಡಿಸಲಿಲ್ಲ. ಅಡ್ಡಿಪಡಿಸಬೇಕಾದ ವಿಚಾರವೂ ಇರಲಿಲ್ಲ. ಆ ಶೋಕದ ದೃಶ್ಯವನ್ನು ಕಣ್ಣಿಂದ ಮರೆಮಾಡಿಕೊಳ್ಳಲೋಸುಗ ಅವಳು ಕೆಳಗಿಳಿದಿರುವಳೆಂಬುದನ್ನು ಅವಳೊಡನೆ ಬಂದಿದ್ದ ಅನುಭವಿಗಳು ತಿಳಿದು ಕ್ಷಣಿಕ ಸಹಾನುಭೂತಿಯಿಂದು "ಆಹಾ !" ಎಂದು ಉಸಿರ್ಗರೆದರು.

ಯಾವತ್ತಿಗೂ ಶಾಂತಮೂರ್ತಿಯಾದ, ಅತ್ಯಂತ ಸಹನಶೀಲೆಯಾದ ಆ ಹುಡುಗಿಯು ಏಕಾಏಕಿ ಏನಾದರೂ ಮಾಡಿಕೊಂಡು ಬಿಡಬಹುದೆಂಬ ಭಯವು ಯಾರಿಗೂ ಇರಲೇ ಇಲ್ಲ. ಅತುಲನಿಗೂ ಆ ಶಂಕೆಯಿರಲಿಲ್ಲ.

ಆದರೂ ಆ ಪ್ರಬಲ ಪ್ರವಾಹದ ತೀರ ಸಮೀಪಕ್ಕೆ ಹೋಗಿ ಕುಳಿತುದನ್ನು ನೋಡಿ ಅತುಲನ ಹೃದಯವು ಹೊಡೆದುಕೊಳ್ಳಲಾರಂಭಿಸಿತು. ಅಲ್ಲಿ ಕುಳಿತು ಕೊಳ್ಳಬೇಡವೆಂದು ಹೇಳಲೆ ಎಂದೊಂದು ಸಲ ಅನ್ನಿಸಿತು. ಮತ್ತೊಂದು ಸಲ ಹೋಗಿ ಹಿಂದೆಯೇ ನಿಂತಿರಲೆ ಅನ್ನಿಸಿತು. ಆದರೆ ನಾಚಿಕೆ ಹಾಗು ನಡುಕ ದಿಂದ ಏನೂ ಮಾಡಲಾಗಲಿಲ್ಲ.

ಉರಿಯ ಶಾಖ ತಟ್ಟದಂತೆ ಎಲ್ಲರೂ ಹೋಗಿ ಒಂದು ಕಡೆ ಕುಳಿತಿದ್ದರು. ಅತುಲನೂ ಅಲ್ಲಿಯೇ ಹೋಗಿ ಕುಳಿತನು. ಎದುರಿಗೆ ಉರಿಯುತ್ತಿರುವ ಚಿತೆ ಯನ್ನು ನೋಡಿದ. ಏಕಾಏಕಿ ಅವನ ಮನದಲ್ಲಿ ಅದೇ ಬಹು ದಿನಗಳ ಆ ಹಳೆಯ ಪ್ರಶ್ನೆಯು ಪುನಃ ನವೀನ ರೂಪದಲ್ಲಿ ಎದ್ದು ನಿಂತಿತು—ಅಂದರೆ ನಿನ್ನೆಯ ದಿವಸ ಏನು ಇತ್ತೋ ಅದು ಇವತ್ತಿಲ್ಲ; ಇಂದು ಇದ್ದ ಆ ನಶ್ವರ ಶರೀರವೂ ನಿಧಾನವಾಗಿ ಭಸ್ಮವಾಗುತ್ತಿದ್ದೆ. ಈಗ ಅದನ್ನು ಗುರುತು ಹಿಡಿ ಯಲು ಸಹ ಅಸಾಧ್ಯ. ಅಂತಹುದರಲ್ಲಿ ಆ ದೇಹವನ್ನೇ ನೆಚ್ಚಿಕೊಂಡು, ಅದನ್ನೇ ಆಶ್ರಯಿಸಿ, ಎಷ್ಟೊಂದು ಆಸೆ, ಎಷ್ಟೊಂದು ಆಕಾಂಕ್ಷೆ, ಎಷ್ಟೊಂದು ಭಯ ಮತ್ತು ಎಷ್ಟೊಂದು ಚಿಂತೆ ಇಟ್ಟುಕೊಳ್ಳಲಾಗಿತ್ತು! ಅದು ಎಲ್ಲಿ ಹೋಯಿತು? ಒಂದೇ ಕ್ಷಣದಲ್ಲಿ ಎಲ್ಲಿ ಮಾಯವಾಗಿ ಹೋಯಿತು? ಹಾಗಾದ ಮೇಲೆ ಅದರ ಬೆಲೆಯೇನು? ಅದು ಸಾಯುವುದಕ್ಕೆ ಎಷ್ಟು ಹೊತ್ತು ಬೇಕು?

ಹಾಗೆಯೇ ಅವನ ಸ್ವಂತ ಗತಿಸಿದ ಜೀವನವು ಕಣ್ಣಿಗೆ ಕಟ್ಟಿದ್ದಂತಾ ಯಿತು. ಹೆಚ್ಚುಕಡಿಮೆ ಮೂರು ವರ್ಷಗಳ ಮುಂಚೆ ಅವನು ಸಾಯುತ್ತಿದ್ದ ನೆಂಬುವುದರಲ್ಲಿ ಏನೂ ಅತಿಶಯವಿರಲಿಲ್ಲ; ಆದರೆ ಸಾಯಲಿಲ್ಲ. ಅಚ್ಚನ್ನಾತ ಭಾವದಿಂದ ಅವನ ದೃಷ್ಟಿಯು ಚಿತೆಯಿಂದ ಹೊರಚಾಚಿ ಬರುತ್ತಿದ್ದ ಹೊಂಬಣ್ಣದ ಜ್ವಾಲೆಗಳನ್ನು ದಾಟಿ ಆ ಹೆಣ್ಣುಮಗಳ ಬಳಿ ಸಾರಿತು. ಅವನ ಮನಸ್ಸು ಹೇಳಿತು—ಅಂದು ನನ್ನನ್ನು ಸಾಯಲು ಯಾರು ಬಿಡಲಿಲ್ಲವೋ ಅವಳೇ ಇವಳು!—ಅವಳು ದುರ್ಗಂಧಯುತವಾದ ಗಂಗಾಜಲದಲ್ಲಿ ಅಸ್ಪಷ್ಟ ನೆರಳನ್ನು ಬೀಳಿಸಿಕೊಂಡು ಸಾಕ್ಷಾತ್ ಶೋಕಮೂರ್ತಿಯಂತೆ ಕುಳಿತಿದ್ದಾಳೆ; ಅವಳ ಒಣಗಿದ ಬಿರಿದ ಕೂದಲು, ಕೊಳಕಾದ ಸೆರಗು ಗಾಳಿಯಲ್ಲಿ ಹಾರಾಡು ತ್ತಿವೆ!

ಅತುಲನ ಕಣ್ಣುಗಳು ತುಂಬಿ ಬಂದವು. ಅವನು ಮನಸ್ಸಿನಲ್ಲಿಯೇ ಅಂದುಕೊಂಡ—"ರೂಪದಲ್ಲೇನಿದೆ? ಏನೂ ಇಲ್ಲ!" ರೂಪಕ್ಕೆ ಅಷ್ಟೊಂದು ಬೆಲೆಯಿರುವುದಾಗಿದ್ದಿದ್ದರೆ ಅವನು ರೂಪದ ಮಾರ್ಕೆಟ್ಟಿನಲ್ಲಿ ಮೂರು ವರುಷಗಳ ಹಿಂದೆಯೇ ದಿವಾಳಿಯಾಗಿ ಬಿಟ್ಟಿದ್ದ. ಆಗ ಅವನ ತೀರ ಹತ್ತಿರದ ಸಂಬಂಧಿಗಳೂ ಅಸಹ್ಯದಿಂದ, ಕಡೆಗಣ್ಣಿನಿಂದಲೂ ಅವನನ್ನು ನೋಡುತ್ತಿರಲಿಲ್ಲ.

ತಾನು ಹೇಗೆ ಕಾಲ ತಳ್ಳುತ್ತಿರುವೆನೆಂಬ ಪರಿವೆ ಆ ಘಳಿಗೆಯಲ್ಲಿ ಖಂಡಿತ ಅವನಿಗಿರಲಿಲ್ಲ. ಚಿತೆಯು ಯಾವಾಗ ತಣ್ಣಗಾಯಿತೆಂಬುದೂ ಸಹ ಅವನಿಗೆ ಗೊತ್ತಾಗಲಿಲ್ಲ. ಅಷ್ಟು ಹೊತ್ತಿನವರೆಗೂ ಅವನ ದೃಷ್ಟಿಯು ಕೇವಲ ನಿಶ್ಚಲ ಮೂರ್ತಿಯಾಗಿ ಕುಳಿತಿರುವ ಜ್ಞಾನದೆಯ ಮೇಲೆಯೇ ಏಕಾಗ್ರವಾಗಿ ನೆಟ್ಟಿತ್ತು.

ಅನಾಥನಾಥನು, "ಇನ್ನೂ ಏತಕ್ಕೆ ಕುಳಿತಿದ್ದೀಯೆ? ಬಾ, ಬಾಕಿ ಕೆಲಸಗಳನ್ನೆಲ್ಲ ಮುಗಿಸೋಣ" ಎಂದನು.

"ನಡೆಯಿರಿ." ಎಂದು ಅತುಲನು ಎದ್ದು ನಿಂತ. ಆಗಲೇ ಇಳಿ ಸಂಜೆಗೆ ತಿರುಗಿತ್ತು. ಅವನು ಏನೋ ಸ್ವಪ್ನ ಕಾಣುತ್ತಿದ್ದ—ಅದೂ ಮಾಯವಾಯಿತು.

ಸೂರ್ಯನು ಪಶ್ಚಿಮಾಕಾಶದಲ್ಲಿ ಕೆಳಕ್ಕಿಳಿಯುತ್ತಿದ್ದ. ಅಮಲಿನ ಪ್ರಕಾಶದಿಂದ, ಪ್ರಕಾಶಿತವಾದ ಆ ಘಾಟಿನಲ್ಲಿ ಕೆಳಗೆ ಬಿದ್ದಿರುವ ಬಳೆಗಳ ತುಂಡುಗಳು ಅತುಲನಿಗೆ ಗೋಚರಿಸಿದವು. ನೋಡುತ್ತ ಅವನು ಅಲ್ಲಿಯೇ ಮೌನದಲ್ಲಿ ನಿಂತುಕೊಂಡ. ಅವು ಅವನಿಂದಲೇ ಕೊಡಲ್ಪಟ್ಟಿದ್ದ ಸಾಧಾರಣ ಬಳೆಗಳು. ಅವುಗಳನ್ನು ಒಂದು ಸಮಯದಲ್ಲಿ ಬಲು ಬೆಲೆಬಾಳುವ ಜವಾಹಿರಿಗೆ ಸಮಾನವೆಂದು ಜ್ಞಾನದೆಯು ತಿಳಿದಿದ್ದಳು. ನೂರಾರು ಬಗೆಯ ಲಾಂಛನಗಳನ್ನು, ಸಾವಿರಾರು ತರಹ ಧಿಕ್ಕಾರಗಳನ್ನು ಸಹಿಸಬೇಕಾಗಿ ಬಂದರೂ ಆ ಬಳೆಗಳಮೇಲಿದ್ದ ಮಮತೆಯನ್ನು ಅವಳು ಬಿಡಲಾರದವಳಾಗಿದ್ದಳು. ಅಂತಹ ಬಳೆಗಳನ್ನು ಇಂದು ಸ್ವಹಸ್ತದಿಂದ ಒಡೆದು ಅವಳು ಅತುಲನಿಗೆ ಅದರ ಋಣ ವಾಪಸು ಮಾಡಿಕೊಟ್ಟಳು. ಅತುಲನು ಜಾಗ್ರತೆ ಮುಂದೆ ಬಗ್ಗಿ ಆ ಬಳೆಗಳ ಚೂರನ್ನು ಅತ್ಯಂತ ಸ್ನೇಹದಿಂದ ಭೂಮಿಯಿಂದ ಆರಿಸಿ ತೆಗೆದುಕೊಂಡನು. ಸಂಪೂರ್ಣವಾಗಿದ್ದಾಗ, 'ಏನು ಮಹಾ, ಗಾಜಿನ ಬಳೆಗಳು' ಎಂಬ ತುಚ್ಛ

ಭಾವನೆ ಮನದೊಳಗೆ ಇತ್ತು. ಆ ಬಳೆಗಳೇ ಈಗ ತುಂಡು ತುಂಡಾಗಿದ್ದರೂ ಅವನ ದೃಷ್ಟಿಯಲ್ಲಿ ಅಮೂಲ್ಯವಾಗಿ ಕಂಡುಬಂತು.

ಹಿಂದೆ ಕಾಲ್ನಡಿಗೆಯ ಶಬ್ದವನ್ನು ಕೇಳಿ ಜ್ಞಾನದಾ ಹಿಂತಿರುಗಿ ನೋಡಿದಳು. ಆ ದೃಷ್ಟಿಯನ್ನು ಅತುಲನಿಂದ ಸಹಿಸಲಾಗಲಿಲ್ಲ. ಒಮ್ಮೆ ಅವಳ ಕೈಹಿಡಿಯಬೇಕೆಂದು ಮುಂದೆ ಹೆಜ್ಜೆಯಿಟ್ಟವನು ಹಾಗೆಯೇ ನಿಂತುಬಿಟ್ಟ— "ಎಲ್ಲರಿಂದಲೂ ತಪ್ಪುಗಳು ಆಗುತ್ತವೆ ಜ್ಞಾನದಾ, ಆದರೆ—"

ಇಷ್ಟು ಹೇಳಿ ಅವನು ತನ್ನ ಮುಷ್ಟಿಯನ್ನು ಬಿಚ್ಚಿ ತೋರಿಸಿದ. ಸಂಜೆಯ ಕಿರಣಗಳಲ್ಲಿ ಮತ್ತೊಮ್ಮೆ ಆ ಗಾಜಿನ ತುಂಡುಗಳು ಹೊಳೆದವು. ಅತುಲನು ಅದೇ ಉಸಿರಿನಲ್ಲಿಯೇ—"ಇಂದು ನೀನು ಯಾವುದನ್ನು ಚೂರು ಚೂರುಮಾಡಿ ಬಿಸುಟುಬಂದಿದ್ದೆಯೋ ಅದನ್ನು ನಾನು ಸ್ಮಶಾನದಿಂದ ಆರಿಸಿ ತಂದಿದ್ದೇನೆ." ಎಂದ.

ಜ್ಞಾನದೆಗೆ ಏನೂ ತಿಳಿಯಲಿಲ್ಲ. ಅದರಿಂದ, ಅವಳು ತನ್ನ ಗಾಢವಾದ ಶೋಕದ ಹೊರೆಯಿಂದ ಶಿಥಿಲವಾದ ಉದಾಸ ದೃಷ್ಟಿಯನ್ನು ಅತುಲನಮೇಲೆ ಬೀರಿದಳು. ಬಹಳ ದಿನಗಳ ನಂತರ ಮತ್ತೆ ಅವಳ ಬಾಯಿಂದ ಮಾತು ಹೊರಬಿತ್ತು. ತಗ್ಗಿದ ಧ್ವನಿಯಲ್ಲಿ, "ಏತಕ್ಕೆ ?" ಎಂದು ಕೇಳಿದಳು

ಉತ್ತರಕೊಡಬೇಕೆಂದು ಪ್ರಯತ್ನಿಸುತ್ತಿರುವಾಗ ಏಕಾಏಕಿ ಅತುಲನ ಕಣ್ಣುಗಳಲ್ಲಿ ನೀರುತುಂಬಿಬಂತು. ಆದರೆ ಅವನು ಸಮಾಧಾನಮಾಡಿಕೊಂಡು, "ಜ್ಞಾನು, ಇಂದು ಅತ್ತೆಯ ಚಿತಾ ಜ್ವಾಲೆಯಲ್ಲಿ ನನಗೊಂದು ಪದಾರ್ಥವು ಸ್ಪಷ್ಟವಾಗಿ ಕಂಡುಬಂತು. ಅದು ಒಡೆಯುವಂತಹುದಲ್ಲ ! ಬಲವಂತದಿಂದ ಯಾರೂ ಅದನ್ನು ತುಂಡರಿಸಲಾರರು. ಬಲವಂತದಿಂದ ಗಾಜಿನ ಬಳೆಗಳನ್ನು ತುಂಡರಿಸಲು ಸಾಧ್ಯವಾದರೂ ನಾವು ಕೊಡುವುದು, ತೆಗೆದುಕೊಳ್ಳುವುದು ಅದೇ ರೀತಿಯಲ್ಲಿ ಅಖಂಡವಾಗಿದೆ. ಅದನ್ನು ತುಂಡರಿಸುವ ಶಕ್ತಿಯು ನನ್ನಲ್ಲಿಯೂ ಇಲ್ಲ; ನಿನ್ನಲ್ಲಿಯೂ ಇಲ್ಲ; ಬೇರೆ ಯಾರಲ್ಲಿಯೂ ಇಲ್ಲ ! ನನ್ನಿಂದ ಯಾವುದನ್ನು ಮಾಡಲು ಸಾಧ್ಯವಾಗುವುದಿಲ್ಲವೋ ಅದನ್ನು ನಿನ್ನಿಂದಲೂ ಮಾಡಲು ಸಾಧ್ಯವಿಲ್ಲ. ನನಗದು ಖಂಡಿತವಾಗಿ ಗೊತ್ತಾಗಿ

ಬಿಟ್ಟಿದೆ. ಆದಕ್ಕಾಗಿಯೇ ಮುರಿದು ತುಂಡಾದ ಈ ಬಳೆಗಳನ್ನು ಸ್ಮಶಾನದಿಂದ ಆರಿಸಿಕೊಂಡು ಎದೆಗಪ್ಪಿಕೊಂಡು ಮನೆಗೆ ಹೋಗುತ್ತಿದ್ದೇನೆ." ಎಂದ.

ಜ್ಞಾನದಾ ಪ್ರಜ್ಞೆಯಿಲ್ಲದವಳಂತೆ ಒಂದೇ ದೃಷ್ಟಿಯಲ್ಲಿ ನೋಡುತ್ತ ಹೇಗಿದ್ದಳೋ ಹಾಗೆಯೇ ಇದ್ದಳು. ಇದ್ದಕ್ಕಿದ್ದಹಾಗೆಯೇ ಅತುಲನು ಎರಡೂ ಕೈಗಳನ್ನೂ ಮುಂದೆ ಚಾಚಿ ಅವಳ ಶೀರ್ಣವಾದ ಕಾಷ್ಟಪ್ರಾಯ ಬಲಗೈಯನ್ನು ಎರಡೂ ಕೈಗಳ ಮಧ್ಯೆ ಭದ್ರವಾಗಿ ಹಿಡಿದುಕೊಂಡನು. ಆದರೂ ಜ್ಞಾನದೆಯು ಅದೇ ರೀತಿ ಶಿಲಾ ಪ್ರತಿಮೆಯಂತೆ ಸ್ಥಿರವಾಗಿದ್ದಳು.

ಅತುಲನು ಒಂದು ಕ್ಷಣ ಸುಮ್ಮನಿದ್ದು ಅಳುವಿನಿಂದ ಭಾರವಾದ ಧ್ವನಿಯಲ್ಲಿ ಹೇಳತೊಡಗಿದ—"ನಾನು ಮಾಡಿರುವ ಪಾಪಗಳಿಗೆ ಭಾರಿ ದಂಡ ಕೊಡು, ಯಾವ ಶಿಕ್ಷೆಬೇಕಾದರೂ ವಿಧಿಸು, ಜ್ಞಾನದಾ. ಆದರೆ ನೀನು ಹೀಗೆ ಮಾಡಲು ಪ್ರಯತ್ನಿಸಬೇಡ. ನಾನೆಷ್ಟೇ ಅಪರಾಧಗಳನ್ನು ಮಾಡಿದ್ದರೂ ನಿನ್ನನ್ನು ನಾನು ವಾಪಸ್ಸುಪಡೆಯಲೇಬೇಕು. ನನ್ನನ್ನು ತ್ಯಾಗಮಾಡಿ ಶಿಕ್ಷೆ ವಿಧಿಸುವ ಶಕ್ತಿ ನಿನ್ನಲ್ಲಿ ಖಂಡಿತವಾಗಿಯೂ ಇಲ್ಲ."

ಇಷ್ಟುಹೊತ್ತಿನಮೇಲೆ ಜ್ಞಾನದೆಯು ತಲೆತಗ್ಗಿಸಿದಳು ; ದೃಷ್ಟಿ ಹೊರಳಿಸಿದಳು. ಆದರೆ ಅವಳ ಬಾಯಿಂದ ಮಾತು ಮಾತ್ರ ಹೊರಬೀಳಲಿಲ್ಲ ಅವಳ ಕಡ್ಡಿಯಂತಹ ಒಣಕೈ ಅತುಲನ ಕೈಗಳ ಮಧ್ಯೆ ನಡುಗತೊಡಗಿತು. ಒಂದರೆ ನಿಮಿಷ ಇಬ್ಬರೂ ಮೌನದಿಂದ ಇದ್ದರು. ಆಮೇಲೆ ಅತುಲನು ನಿಧಾನವಾಗಿ ಜ್ಞಾನದೆಯ ಕೈಗಳನ್ನು ಬಿಟ್ಟು, "ನಡೆ, ಮನೆಗೆ ಹೋಗೋಣ ಎಲ್ಲರೂ ಆಗಲೇ ಮುಂದೆ ಹೊರಟುಹೋದರು." ಎಂದು ಹೇಳಿದನು.

---